ವರ್ಗಣಿ ದರ
( ಅಂಚೆವೆಚ್ಚ ಸೇರಿ )
ವರ್ಷಕ್ಕೆ ರೂ. ೬-೪-೦
೬ ತಿಂಗಳಿಗೆ ,, ೩-೪-೦
೩ ತಿಂಗಳಿಗೆ ,, ೧-೧೨-೦
ವ್ಹಿ. ಪಿ. ಮೂಲಕ ತರಿಸಿಕೊಂಡಲ್ಲಿ ೫ ಆಣೆ ಹೆಚ್ಚಿಗೆ ಬೀಳುವದು.

# ಕರ್ಮವೀರ

KARMAVEER
WEEKLY
HUBLI
MAR. 4
1946

ಸಂಪಾದಕರು : ಹ. ರಾ. ಪುರೋಹಿತ, ಎಂ. ಎ. ] ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ [ Editor : H. R. Purohit, M. A.

ಸಂಪುಟ ೧೭ ] 卐 ಹುಬ್ಬಳ್ಳಿ ಸೋಮವಾರ ತಾರೀಖು ೪ — ೩ — ೧೯೪೬ 卐 [ ಸಂಚಿಕೆ ೪೫

# ಮಧ್ಯಪೂರ್ವದಲ್ಲಿ ರಾಜಕೀಯ ಸಮುದ್ರಮಂಥನ

## ಇರಾಣದ ಎಣ್ಣೆಗಾಗಿ ಆಂಗ್ಲೋ-ರಶಿಯನ್ನರಲ್ಲಿ ಕಚ್ಚಾಟ

### ಬ್ರಿಟಿಶ ಪರಿಸ್ಥಿತಿಯ ಮೂಲಭೂತ ದೌರ್ಬಲ್ಯ

ಹಿಂದುಸ್ತಾನದ ಉತ್ತರ-ವಾಯವ್ಯಗಡಿಗಳಿಂದಾಚೆಗೆ, ಹಿಮಾಲಯದಿಂದ ನೀಲ ನದಿಯ ವರೆಗಿನ ವಿಶಾಲ ಭೂಭಾಗದಲ್ಲಿ ಪ್ರಚಂಡವಾದ ಅಂತಃಪ್ರವಾಹಗಳು ಧಾವಿಸತೊಡಗಿವೆ. ಜನಾಂಗಿಕ, ಸಾಮಾಜಿಕ, ಮತ್ತು ಅದರ ಮೇಲೆ ಪ್ರಬಲ ರಾಷ್ಟ್ರಗಳ ರಾಜಕೀಯ ಹಿತಸಂಬಂಧಗಳು ಮಧ್ಯಪೂರ್ವದ ಕುಲುಮೆಯಲ್ಲಿ ಕತಕತನೆ ಕುದಿಯುತ್ತಿವೆ. ಹಳೆಯ ಹಿತಸಂಬಂಧಗಳು ಮುರಿದು ಬೀಳುವ ಸ್ಥಿತಿಯಲ್ಲಿವೆ. ಇರಾಣದಲ್ಲಿ ಇಜಿಪ್ತದಲ್ಲಿ ಎದ್ದ ತಂಟೆಗಳು, ಗಲಭೆಗಳು ಇದರ ಪ್ರಾಥಮಿಕ ಸೂಚನೆಗಳು ಮಾತ್ರ. ಈಗ ನೂರಾರು ವರ್ಷಗಳಿಂದ ಪರಿವರ್ತನೆಗೆ ಬೆನ್ನು ತೋರಿ ತನ್ನ ಒಪ್ಪಿನೊಳಗೆ ಹುದುಕಿಕೊಂಡಿದ್ದ ಮಧ್ಯಪೂರ್ವದ ಆಮೆ ಇದೀಗ ಎಚ್ಚರುವ ಲಕ್ಷಣಗಳು ತೋರಹತ್ತಿವೆ.

### ಅಜ್ಞಾನ, ರೋಗ, ದಾರಿದ್ರ್ಯ

ಇಜಿಪ್ತದಿಂದ ಇರಾಣದಗಡಿ ವರೆಗೆ ಹಬ್ಬಿರುವ ಈ ಮುಸ್ಲಿಂ ದೇಶಗಳ ಒಟ್ಟು ವಿಸ್ತಾರ, ರಶಿಯಾವನ್ನು ಬಿಟ್ಟು ಯುರೋಪಖಂಡದಷ್ಟು ಇದೆ. ಆದರೆ ಅದರ ಜನಸಂಖ್ಯೆ ಆ ಮಾನದಿಂದ ಬಹಳ ಕಡಿಮೆ. ಆದುದರಿಂದ ಅಲ್ಲಿಯ ನಿವಾಸಿಗಳ ಜೀವನದ ಮಟ್ಟ ಬಹಳ ಏರಿಕೆಯದಿರಬೇಕೆಂದು ಭಾವಿಸಲು ಎಡೆಯುಂಟು, ವಸ್ತುಸ್ಥಿತಿ ಇದಕ್ಕೆ ಬದ್ಧವಿರುದ್ಧವಾಗಿದೆ. ಈ ಜನರ ಜೀವನ— ಪಾಲಿಸ್ತಾನ, ಸೀರಿಯಾ, ಲೆಬನಾನ್ ಹೊರತು ಪಡಿಸಿದರೆ—ತಲಾ ದಿನಕ್ಕೆ ಒಂದು ಪೆನ್ನಿನ ಅಥವಾ ಒಂದಾಣೆಯ ವೆಚ್ಚದಿಂದ ನಡೆಯುತ್ತದೆ. ಇದೊಂದೆ ಅಲ್ಲಿಯ ಜನರ ಅರ್ಥಿಕ, ಸಾಂಸ್ಕೃತಿಕ ಮಟ್ಟವನ್ನು ಗುರುತಿಸಲು ಸಾಕು.

ಮಧ್ಯಪೂರ್ವದ ಪ್ರದೇಶಗಳು "ಒಂದು ಸಾಮಾಜಿಕ ಮತ್ತು ಆರ್ಥಿಕ ಹೊಲಸುಗೇರಿ" ಎಂದು ಬ್ರಿಟಿಶ ವಿದೇಶ ಧೋರಣೆಯ ಮೇಲೆ ಪ್ರಬಲ ಪ್ರಭಾವ ಬೀರುವ ಲಂಡನದ "ಚ್ಯಾಟ್ ಹ್ಯಾಂ ಹೌಸ" ಸಂಘದ ಕಾಯರೊ ಗುಂಪಿನವರು ಹೊರಡಿಸಿದ ಗೌಪ್ಯ ವರದಿಯಲ್ಲಿ ಹೇಳಲಾದುದನ್ನು ಅಮೇರಿಕೆಯ "ನೇಶನ್" ಪತ್ರಿಕೆ ಹೊರಗೆಡಹಿದೆ. ಈ ಹೇಳಿಕೆ ಸರ್ವಥಾ ಅತಿಶಯೋಕ್ತಿಯಲ್ಲ. ಇರಾಣದಲ್ಲಿ ಹುಟ್ಟುವ ಪ್ರತಿ ನಾಲ್ಕು ಮಕ್ಕಳಲ್ಲಿ ಮೂರು ಮೊದಲನೇ ಹುಟ್ಟುಹಬ್ಬವನ್ನೇ ಕಾಣುವದಿಲ್ಲ. ಇರಾಕದ ಮೂರು ದೊಡ್ಡ ನಗರಗಳಲ್ಲಿ ಶಿಶು ಮರಣದ ಸಂಖ್ಯೆ ೧೯೩೮-೪೧ರಲ್ಲಿ ಸರಾಸರಿ ೧೦೦೦ಕ್ಕೆ ೩೨೭ ಇತ್ತು. ಇರಾಣದ ೧೨೦ ಲಕ್ಷದಷ್ಟು ಜನಸಂಖ್ಯೆಯಲ್ಲಿ ೪೦ ಲಕ್ಷ ಜನರಿಗೆ ಪರಮಾ ರೋಗ ಅಂಟಿದೆ. ಇತರ ಮಧ್ಯಪೂರ್ವ ದೇಶಗಳಲ್ಲಿಯೂ ಮೇಹ ರೋಗಗಳ ಹಬ್ಬುಗೆಯ ಪರಿಮಾಣ ಇದಕ್ಕಿಂತ ಕಡಿಮೆಯಿಲ್ಲ.

"ಮುಂದುವರಿದ" ಇಜಿಪ್ತ ಒಳಗೊಂಡು, ಮಧ್ಯಪೂರ್ವದೇಶಗಳ ಅರ್ಥಿಕ ಹಿಂದುಳಿತನ ಕಲ್ಪನಾತೀತವಾದುದು. ಎಲ್ಲ ಕಡೆಗಳಲ್ಲಿಯೂ ಭೂಮಿಯ ಒಡೆತನ ದೊಡ್ಡ ಜಮೀನದಾರರದು. ಒಕ್ಕಲಿಗರ ಶೋಷಣೆಗೆ ಮಿತಿಮೇರೆಯಿಲ್ಲ. ಒಕ್ಕಲಿಗರೆಲ್ಲರೂ ಸಾವುಕಾರರಿಗೆ ಮೂಗಿನ ವರೆಗೆ ಸಾಲಗಾರರಾಗಿದ್ದಾರೆ. ಪಾಲಿಸ್ತಾನ, ಸೀರಿಯಾ ಮತ್ತು ಲೆಬನಾನದಲ್ಲಿ ಯಹೂದ್ಯರ ಸಂಪರ್ಕ ಬಂದ ಹಳ್ಳಿಗಳು ಮಾತ್ರ ಇದಕ್ಕೆ ಸ್ವಲ್ಪ ಅಪವಾದರೂಪವಾಗಿವೆ. "ಎಲ್ಲೆಡೆಯಲ್ಲಿಯೂ ಒಕ್ಕಲಿಗರು ಅಜ್ಞಾನಿ ರೋಗಿ, ಅಪರಿವರ್ತನಶೀಲ" ರಿರುವರೆಂದು ಮೇಲೆ ಹೇಳಿದ ಚಾಟ್‌ಹ್ಯಾಂ ವರದಿ ಒಪ್ಪುತ್ತದೆ. ಇರಾಣ ಹೆಸರಿಗೆ ಮಾತ್ರ ಪ್ರಜಾತಂತ್ರ ರಾಷ್ಟ್ರ. ಅದಕ್ಕೊಂದು ಪಾರ್ಲಮೆಂಟು— "ಮಜ್ಲಿಸ್" ಕೂಡ ಇದೆ. ಆದರೆ ಅಧಿಕಾರ ಕೇವಲ ೨೦೦೦ ಶ್ರೀಮಂತ ಕುಟುಂಬಗಳ ಕೈಯಲ್ಲಿದೆ. ಅವರೇ ಸರಕಾರ, ಅವರೇ ಮಜ್ಲಿಸ್. ಈ ತುದಿಯ ಇರಾಣದ ಮಟ್ಟಿಗೆ ಇದೆಷ್ಟು ಸತ್ಯವೊ ಆ ತುದಿಯ ಉತ್ತರ ಆಫ್ರಿಕೆಯ ಇಜಿಪ್ತದ ವಿಷಯಕ್ಕೂ ಇವೆರಡರ ನಡುವಣ ನಾಡುಗಳ ವಿಷಯಕ್ಕೂ ಅಷ್ಟೇ ಸತ್ಯ. ಇಜಿಪ್ತದಲ್ಲಿ ಶ್ರೀಮಂತ "ಪಾಶಾ"ರೇ ಸರಕಾರ. ಬಡ "ಫೆಲಾಹೀನ" (ರೈತ) ರಿಗೆ ದನಿಯೆತ್ತುವ ಅವಕಾಶವಿಲ್ಲ. ಹಳ್ಳಿಗಳ ವರೆಗೆ ಬೆಳಕೇ ಮುಟ್ಟಿಲ್ಲ.

ಬಹುಜನ ಸಮಾಜ ಹೀಗೆ ಅಜ್ಞಾನ, ಅಸಂಸ್ಕಾರ— ಅಥವಾ ಕುಸಂಸ್ಕಾರ—ದಲ್ಲಿ ಮುಳುಗಿರುವಾಗ ಶ್ರೀಮಂತರ ರಾಜ್ಯ ಯಥಾಸಾಂಗವಾಗಿ ನಡೆದಿರುವದು ಆಶ್ಚರ್ಯವಲ್ಲ. ಎಲ್ಲ ರಾಜಕೀಯ ಚಟುವಟಿಕೆಗಳೂ ಮೇಲಿನ ಕೈಬೆರಳಲ್ಲೆಣಿಸುವಷ್ಟು ಜನರನ್ನು ಹೊರತು ಕೆಳಗಿನವರನ್ನು ಸ್ಪರ್ಶಿಸುವದು ಕೂಡ ಇಲ್ಲ. ಶ್ರೀಮಂತ ರಾಜಕಾರಣಿಗಳ ಪಕ್ಷ ಪ್ರತಿಪಕ್ಷಗಳ ಸ್ಪರ್ಧೆಯೇ ಅಲ್ಲಿಯ ರಾಜಕಾರಣ. ಈ ಸ್ಪರ್ಧೆಯಲ್ಲಿ ಇರಾಕದಲ್ಲಿ ಕಳೆದ ೨೫ ವರ್ಷಗಳಲ್ಲಿ ೪೭ ಮಂತ್ರಿಮಂಡಲಗಳು ಆಗಿ ಹೋದವು. ಇರಾಣಿ ಮಜ್ಲಿಸದಲ್ಲಿ ಜನಸಾಮಾನ್ಯದ ಪರಿಸ್ಥಿತಿಯನ್ನು ಸುಧಾರಿಸಲು ಆ ದೇಶದ ಪ್ರತಿಗಾಮಿ ಸರಕಾರ ಕೂಡ ಅವಶ್ಯವೆಂದು ಭಾವಿಸಿ ಮಂಡಿಸಿದ ಭೂಸುಧಾರಣೆಯ ಹಲವಾರು ಮಸೂದೆಗಳು ನೆನಗುದಿಗೆ ಬಿದ್ದಿವೆ. ಏಕೆಂದರೆ ಮಜ್ಲಿ ಸದಸ್ಯರು ಬಹಳಮಟ್ಟಿಗೆ ದೊಡ್ಡ ದೊಡ್ಡ ಜಮೀನದಾರರು. ಈ ಮಸೂದೆಗಳಿಂದ ಅವರ ಹಿತ ಭಂಗವಾಗುವದಾದುದರಿಂದ ಅವರು ಮಜ್ಲಿಸದಲ್ಲಿ ವಿಲಂಬಕ ಧೋರಣೆಯನ್ನು ಹಟದಿಂದ ಅನುಸರಿಸುತ್ತಾರೆ. ಸೌದಿ ಅರೇಬಿಯಾ, ಟ್ರಾನ್ಸಜಾರ್ಡನ, ಇರಾಕಗಳ ರಾಜಕಾರಣ ಇಬ್ನ ಸೌದನ ಮತ್ತು ಹಾಶಿಮಿ ಮನೆತನಗಳ ನಡುವಣ ಸ್ಪರ್ಧೆಯ ರೂಪದಲ್ಲಿ ಪರಿಣಮಿಸಿದೆ.

### ವಿದೇಶಿಗಳ ಆಟದ ಬಯಲು

ಇಂಥ ಮಧ್ಯಯುಗೀನ ಸ್ಥಿತಿಯಲ್ಲಿರುವ ದೇಶಗಳು ವಿದೇಶಿ ಪ್ರಭುತ್ವಗಳ ಆಟದ ಬಯಲಾಗಿ ಮಾರ್ಪಟ್ಟದ್ದು ಸ್ವಾಭಾವಿಕ. ಈ ರಂಗದಲ್ಲಿ ಈಗೆರಡು ಶತಮಾನಗಳಿಂದ ಬ್ರಿಟಿಶ, ರಶಿಯನ್, ಫ್ರೆಂಚ್ ಜರ್ಮನ ಮತ್ತು ದುರ್ಬಲ ತುರ್ಕಿ ಸಾಮ್ರಾಜ್ಯವಾದಿಗಳು ಪ್ರಭುತ್ವಕ್ಕಾಗಿ ಕಚ್ಚಾಡುತ್ತ ಬಂದರು. ಈಚೆಗೆ ಸೌದಿ ಅರೇಬಿಯಾದಲ್ಲಿ ಎಣ್ಣೆ ಸವಲತ್ತುಗಳನ್ನು ಸಂಪಾದಿಸಿ ಅಮೇರಿಕೆಯೂ ಈ ಓಟದಲ್ಲಿ ಭಾಗವಹಿಸತೊಡಗಿದೆ.




ಬ್ರಿಟಿಶರಿಗೆ ಈ ವಿಶಾಲ ಜನವಿರಳ ಪ್ರದೇಶದಲ್ಲಿ ಎಲ್ಲ ರಾಷ್ಟ್ರಗಳಿಗಿಂತ ಹೆಚ್ಚಿನ ಸ್ವಾರ್ಥವಿದೆ. ಇರಾಣ-ಇರಾಕಗಳ ಎಣ್ಣೆ ಗಣಿ, ಹಿಂದುಸ್ತಾನದ ಸಂರಕ್ಷಣೆಗಾಗಿ ಪರ್ಶಿಯನ್ ಕೊಲ್ಲಿ ಮತ್ತು ಸುಯೇಜ ಕಾಲಿವೆ ಇವುಗಳ ಭದ್ರತೆ—ಇವು ಅವರ ಆಟದ ಪ್ರಬಲ ಉದ್ದೇಶಗಳಾಗಿದ್ದವು, ಇವೆ. ಪರ್ಶಿಯನ್ ಕೊಲ್ಲಿಯಲ್ಲಿಯ ಬಿಸಿ ನೀರಿನ ಬಂದರದ ಅಪೇಕ್ಷೆ ಚಳಿಗಾಲದಲ್ಲಿ ಮಂಜುಗಟ್ಟಿದ ಬಂದರಗಳಿಂದ ತೊಂದರೆ ಪಡುತ್ತಿರುವ ರಶಿಯನ್ನರಿಗೆ ಎಂದಿನಿಂದಲೂ ಇದ್ದದ್ದೆ. ಮೇಲಾಗಿ ಇರಾಣದಲ್ಲಿ ಎಣ್ಣೆಯ ಸವಲತ್ತುಗಳಿಗೂ ಅವರು ಸ್ಪರ್ಧಾಳುಗಳಾಗಿದ್ದರು. ಇದ್ದಾರೆ "ಯುರೋಪಿನ ರೋಗಿ" ಯೆಂದು ಹೆಸರಾಗಿದ್ದ ಸುಲ್ತಾನರ ಕಾಲದ ತುರ್ಕಿಯ ಕೈಯಲ್ಲಿ ಮಧ್ಯಪೂರ್ವದ ರಾಜ್ಯಗಳಲ್ಲಿ ಹಲವು ಸೇರಿಕೊಂಡಿದ್ದವು ರಶಿಯಾದ ಪ್ರಾಬಲ್ಯವನ್ನು ನಿರೋಧಿಸಲು ತುರ್ಕಿಗೆ ಬ್ರಿಟಿಶರ ಬೆಂಬಲ ದೊರಕುತಿತ್ತು. "ಬ್ರಿಟನದ ಜಾಗತಿಕ ಸ್ಥಾನಮಾನವನ್ನು ಮುರಿಯುವ ಸಲುವಾಗಿ" ಈ "ಹೊಲಸುಗೇರಿ"ಯ "ಆಯಕಟ್ಟಿನ ಸ್ಥಿತಿಯನ್ನು ಬಳಸಬಲ್ಲಷ್ಟು ಪ್ರಬಲವಾದ" ರಾಷ್ಟ್ರದ ಕೈಗೆ ಬೀಳದಂತೆ ನೋಡುವದೇ ಈ ಪ್ರದೇಶದಲ್ಲಿ ಬ್ರಿಟಿಶರ ಧೋರಣೆಯ ನೆಲಗಟ್ಟಾಯಿತು—ಆ "ಪ್ರಬಲವಾದ" ರಾಷ್ಟ್ರವೆಂದರೆ ಮುಖ್ಯವಾಗಿ ರಶಿಯಾ. ಸಾಮ್ರಾಜ್ಯ ರಕ್ಷಣೆಯ ಈ ಧೋರಣೆಯ ಫಲವಾಗಿ ಚಾಟ್‌ಹ್ಯಾಂ ವರದಿ ಹೇಳುವಂತೆ ಈ ಭೂಭಾಗದಲ್ಲಿ ಬ್ರಿಟಿಶರ "ಹಿತಸಂಬಂಧ ಕೇವಲ ನಕಾರಾತ್ಮಕ" ವಾಗಿ ರೂಪುಗೊಂಡಿತು. ಅದೇ ಧೋರಣೆ ಇಂದಿಗೂ ಹಾಗೆಯೇ ಸಾಗಿ ಬಂದಿದೆ. ಈ "ನಕಾರಾತ್ಮಕ ಹಿತಸಂಬಂಧ"ದ ಫಲವಾಗಿ ಈ ಭೂಭಾಗಗಳಲ್ಲಿನ ಅತ್ಯಂತ ಪ್ರತಿಗಾಮಿ ಶಕ್ತಿಗಳಿಗೆ ಬ್ರಿಟಿಶರು ಬೆಂಬಲ ಕೊಟ್ಟಿದ್ದರಿಂದಲೇ ಅವುಗಳು ಯಾವ ರೀತಿಯಲ್ಲಿಯೂ ಇಂದಿಗೂ ಮುಂದುವರಿಯುವದು ಸಾಧ್ಯವಿಲ್ಲವಾಯಿತು. ಆದುದರಿಂದಲೇ ಇಲ್ಲಿನ ಜನರ ಆರ್ಥಿಕ ಸಾಮಾಜಿಕ ಸುಧಾರಣೆಯಾಗಲಿಲ್ಲ. ಹಾಗಾಗುವದು ಬ್ರಿಟಿಶರ ಹಿತಕ್ಕೆ ವಿಘಾತಕವಾಗುತಿತ್ತು. ಏಕೆಂದರೆ ಅದು ಈಗ ಇಜಿಪ್ತ ಹಿಂದುಸ್ತಾನಗಳಲ್ಲಿ ಸಿದ್ಧವಾದಂತೆ ಬ್ರಿಟಿಶರಿಗೆ ಇಲ್ಲದ ದುಶ್ಚಿಂತೆಗಳನ್ನು ಉಂಟುಮಾಡುತಿತ್ತು.

### ಬ್ರಿಟಿಶರಿಗೆ ಬಿಡುಗೈ

೧ನೇ ಮಹಾಯುದ್ಧದಲ್ಲಿ ಸುಲ್ತಾನರ ತುರ್ಕಿ ಜರ್ಮನರೊಡನೆ ಸೇರಿಕೊಳ್ಳುವ ಮೂರ್ಖತನ ಮಾಡಿದ್ದರಿಂದ ಈ ರಾಷ್ಟ್ರಗಳಲ್ಲಿ ಇತಿಹಾಸದಲ್ಲಿ ಮೊದಲನೆ ಬಾರಿ ಚೈತನ್ಯದ ಪ್ರದರ್ಶನವಾಗುವ ಸಂಭವವುಂಟಾಯಿತು. ಆ ಅದ್ಭುತ ಚರಿತ್ರದ ಲಾರೆನ್ಸನೆಂಬ ಬ್ರಿಟಿಶ "ಪಂಚಮದಳ ನಿಪುಣ"ನು ಅರೇಬಿಯಾದಲ್ಲಿ ಮೊಟ್ಟಮೊದಲು ತುರ್ಕಿಯ ಸುಲ್ತಾನರ ವಿರುದ್ಧ ಅರಬರ ರಾಷ್ಟ್ರೀಯತೆಯನ್ನು ಜಾಗರಿಸಿದನು. ದುರ್ಬಲ ಸುಲ್ತಾನನ ಕೈಯಿಂದ ಅವನ ಸಾಮ್ರಾಜ್ಯದ ಹಣ್ಣುಗಳೆಲ್ಲ ಉದುರಿ ಹೋದವು. ಕೊನೆಗೆ ಸುಲ್ತಾನನ ಸಮಾಪ್ತಿಯೂ ಆಗಿ ಕಮಾಲಪಾಶಾರು ಪ್ರಜಾರಾಜ್ಯ ಸ್ಥಾಪಿಸಿದ್ದು ಸರ್ವವಿದಿತವಾಗಿದೆ. ಕ್ರಾಂತಿಯಾಗಿ ಆಗ ರಶಿಯಾ ಅತ್ಯಂತ ಅಪಾಯಕರ ಪರಿಸ್ಥಿತಿಯದ್ದುದರಿಂದ ಕೆಲಕಾಲದ ಮಟ್ಟಿಗೆ ಅದು ಮಧ್ಯಪೂರ್ವದ ರಾಜಕಾರಣದಲ್ಲಿ ಚಲ್ಲಾಟವಾಡುವದನ್ನು ಬಿಟ್ಟುಬಿಟ್ಟಿತು. ಇಷ್ಟೇ ಅಲ್ಲ, ಆದರ್ಶ

–೧೫ನೇ ಪುಟ ನೋಡಿರಿ

## ಜಗದ ಲೀಲೆ

೧

ಬಾ ರನ್ನೆ, ಬಾ ಚಿನ್ನೆ, ಬಾ ಎನ್ನ ಮನದನ್ನೆ
ಬಾಯಿಲ್ಲಿ ಬಾ ನೋಡ ಬಾ ॥ ॥—
ಬಾಯಿಲ್ಲಿ ಬಳಿ ನಿಲ್ಲು ದೃಷ್ಟಿ ಮುಂದಕೆ ಚೆಲ್ಲು
ಜಗದ ಲೀಲೆಯನಿಲ್ಲಿ ಬಾ ನೋಡ ಬಾ ॥ ॥—

೨

ನಸುಕು ಹರಿದಿದೆ ಸುತ್ತು ಬೆಳಕು ಬರುತಿದೆ ಎತ್ತು
ಚಣಚಣಕೆ ಹೊಸಹೊಸದು ತೋರುತಿಹುದು
ಹೊದ್ದ ಮುಸುಕನು ಒಗೆದು ಎದ್ದು ಬಾ ಸೀ ಜಿಗಿದು
ಇಗೊ ನೋಡು ಸಮಯವಿದು ಜಾರುತಿಹುದು.

೩

ನಾಲ್ಕು ನಿಟ್ಟಿಗು ಕಾಂಬ ಚೆಲುವಿನಾ ಪ್ರತಿಬಿಂಬ
ನಾಲ್ಕು ಕಣ್-ಗೊರಿಬೆಯಲಿ ಬಿಂಬಿಸಾಗಲಿ ಎಂಟು
ಎಂಟಾಗಿ, ಎಂಟೆಂಟು ದಿಕ್ಕಿನಲಿ ಉಂಟಾಗಿ
ಹೊಸೆದಿರಲಿ ಚೆಲುವಿನಾ ಎಂಟರದ ಗಂಟು—

೪

ಇಗೊ ನೋಡು ನೇಸರನು ಸೌಂದರ್ಯದಾಸರನು
ತಾ ನಕ್ಕು ಕುಸುಮಗಳ ನಗಿಸುತಿಹನು;
ಅವನ ಜೊತೆ ನಗು ಸೂಸಿ ಹರುಷಹೊಳೆಯಲಿ ಈಸಿ
ತೇಲಿಬಿಡುವಾ ನಮ್ಮ ಜೀವಸುಮಗಳನು—

೫

ಸೌರಭವ ಸೂಸುತಿಹ ಸುಮಗಳಿಗೆ ಮುದ್ದಿಟ್ಟು
ಅದರ ಪರಿಮಳ ಪೊತ್ತು ಬೀಸುತಿರುವನು ಅನಿಲ
ಸಂದೇಹ ತಂದಿಹನು, ನಸುನಗುತ ನಿಂದಿಹನು;
ಜೊತೆಗೂಡಿ ಆಲಿಸುತ ಹರಿಸೋಣ ನಗೆ-ಹೊನಲ.

೬

ಮುತ್ತಿನೆರಕದ ಮುಸುಕ ಸರಿಸಿ ಮೂಡಲವನಿತೆ
ಹಣೆಗೆ ಕುಂಕುಮವಿಟ್ಟು ಉಷೆಯು ಸ್ವಾಗತಿಸುವಳು
ಮಂಗಳಾರತಿ ಎತ್ತೆ ಪ್ರಕೃತಿವನಿತೆಯು ಇತ್ತ
ಪಕ್ಕಿ-ಸಂಕುಳ ಗೀತೆ ಪೇಳುತಿವೆ ಬಾ ಕೇಳು.

೭

ಗಿರಿಗಗನ ಅಗೊ ಅಲ್ಲಿ ಗಲ್ಲಗಲ್ಲವ ಹಚ್ಚಿ
ಉಲ್ಲಾಸದ ಮಾತನ್ನೇನೊ ನುಡಿಯುತಿಹವು
ಎತ್ತ ನೋಡಿದತ್ತ ಕಾಂಬ ಭೂ-ವ್ಯೋಮಗಳು
ಅಗೊ ನೋಡು, ದೂರದಲಿ ತಬ್ಬಿಕೊಳುತಿಹವು—

— ಎಸ್. ಎಸ್. ಬಸುಪಟ್ಟದ
ಡಿ. ಎ. ವ್ಹಿ. ಕಾಲೇಜ. ಸೊಲ್ಲಾಪುರ

## ಕರ್ಮವೀರ

ಶಕ್ತಿ ಉಕ್ಕುತಲಿಹುದು ಮುಕ್ತತೆಗೆಂದು ಭಾರತ
ಭೂಮಿಯ
ಶಕ್ತಿ ಮನ ಶಕುತಿಯನು ಬೀರಲು ಯುಕ್ತ
ಸಮಯವ ನೋಳ್ಪುದು—
ಬುದ್ಧಿ ನಿರ್ಧರಿಸಿದೆ—ನಡು
ಬದ್ಧವಾಗಿಯೆ ನಿಂದಿದೆ.

ನನ್ನ ಆಯುಷವೆಲ್ಲ ನನ್ನಿಯ ಸಾಧನೆಗೆ
ಮುಡುಪಿಡುವೆನು
ಮುನ್ನಿನಾ ವೈಭವವ ತಾರಲು ಅನ್ನ ನೀರನು
ಮರೆವೆನು
ನಾಡಹಿತವೇ ನನ ಹಿತ—ನಾ
ಡಿಗರ ಮತವೇ ನನ ಮತ.

ಬಿಸಿಲು ಬೆಂಕಿಯ ಕಾಯುತಿರ್ದರು ಮಳೆ ಸಿಡಿಲು
ಮೇಲ್ವಾಯ್ದರೂ
ಸಾಸಿರೆಡರುಗಳೆದುರು ಬಂದರು ತಡೆಯದಯ
ಮುನ್ನಡೆಯುವ
ಗಟ್ಟಿ ಹೃದಯವು ಎನ್ನದು—ತಡೆ
ಗಟ್ಟಲಾರಿಗು ಬಾರದು.

ಎಳೆವಯಸು ಎನವೆಂದು ಮೆಲುಮಾತಿನಲಿ
ಹಿಂದಕೆ ಕರೆದರೂ
ತಾಯಿತಂಗಿಯರೆಲ್ಲ ಪ್ರೀತಿಯ ಪಾಶದಿಂ
ಬಿಗಿದೆಳೆದರೂ
ಎನ್ನ ಮನ ಹಿಂದೆಗೆಯದು—ದೃಢ
ನಿಶ್ಚಯವ ತಾ ತೊರೆಯದು.

ಕಷ್ಟಸೋಸುವ ಜೀವನವೆ ಎನಗೊಳ್ಳೆ
ಪುಷ್ಟಿಯನೀವುದು
ದುಷ್ಟರನು ಮೆಟ್ಟುವದರಲ್ಲಿಯೆ ಮಿಗಿಲು
ನೆಮ್ಮದಿಯಿರುವದು
ದೇಶ ಶಾಂತಿಯಲೀಜಲಿ—ಎನ
ದೇಹವಳಿದರೂ ಅಳಿಯಲಿ.

ಚಿಕ್ಕ ಕತೆ

# ಆ ನದೀ ತೀರದಲ್ಲಿ!

(ಕವಿ ರವೀಂದ್ರರ ಕತೆಯೊಂದು)

ಅನುವಾದಕ- ಎನ್. ಗಣೇಶ ಚಿಪಳೂಣಕರ, ಹೆಬ್ರಿ

ಆಶ್ವೀಜಮಾಸದ ದಿವಸಗಳು. ಗಂಗಾನದಿಗೆ ನೆರೆ ಬಂದಿದ್ದಿತು ನದಿಗೆ ಇಳಿಯಲು ಕಟ್ಟಿಕೊಳ್ಳಲಾದ ಹಂತಗಳಲ್ಲಿ ನಾಲ್ಕು ಮಾತ್ರ ಮೇಲಕ್ಕೆ ಕಾಣುತ್ತಿದ್ದವು. ಪೊದೆ-ಗಿಡಗಳೆಲ್ಲ ಜಲರಾಶಿಯಲ್ಲಿ ಮುಳುಗಿದ್ದವು. ನೀರು ನೀರಳೆ ಮರಗಳಿಗೆ ಕಟ್ಟಿಡಲಾದ ಚಿಕ್ಕ ಚಿಕ್ಕ ಡೋಣಿಗಳು ತರಂಗವಾಡುತ್ತಿದ್ದವು. ಉನ್ನತ ಪ್ರದೇಶಗಳಲ್ಲಿನ ದರ್ಭೆ ಹುಲ್ಲಿನ ಮೇಲೆ ನೀರಿನ ಹನಿಗಳು ಕುಂತು, ಸೂರ್ಯನ ಎಳೆ ಹೊಂಬಿಸಲಿಗೆ ಅವು ಮುತ್ತುಗಳಂತೆ ಬಿಂಬಿಸುತ್ತಿದ್ದವು. ಅಂತೂ ಒಂದು ಆನಂದಕರವಾದ ನೋಟ—ಆಹ್ಲಾದ!

ಚಿಕ್ಕ ದೋಣಿಗಳು ತಮ್ಮ ಶ್ವೇತವರ್ಣದ ಶುಭ್ರ ಪತಾಕೆಗಳನ್ನು ಸೂರ್ಯಪ್ರಕಾಶಿತ ನದಿಯ ಮೇಲೆ ನಾಲ್ಕೂ ದಿಕ್ಕಿಗೆ ಪಸರಿಸಿದ್ದವು. ಶಿವ ಮಂದಿರದ ಪೂಜಾರಿ ತನ್ನ ಸಂಧ್ಯಾ-ಪೂಜೆಗಳ ಸಾಹಿತ್ಯವನ್ನು ಹಿಡಿದುಕೊಂಡು ಸ್ನಾನಕ್ಕಾಗಿ ಆಗಮಿಸಿದನು. ಊರ ವನಿತೆಯರು ತಮ್ಮ ಕಂಚಿನ ಬಿಂದಿಗೆಗಳನ್ನು ಎತ್ತಿಕೊಂಡು, ಇಬ್ಬರು, ಮೂವರು ಹೀಗೆ ಕೂಡಿ ನದಿಯ ದಿಕ್ಕಿಗೆ ಬರಹತ್ತಿದರು.

....ಅದೇ ವೇಳೆಗೆ ಕುಸುಮಳು ಸಹ ನಿತ್ಯ ಸ್ನಾನಕ್ಕೆ ಬರತಕ್ಕವಳು, ಆದರೆ ಇಂದು ಆಕೆ ಬರಲಿಲ್ಲ. ಭವಾನಿ ಮತ್ತು ಸ್ವರ್ಣಲತೆಗೆ ಏನೋ ತಪ್ಪಿದಂತೆ ಭಾಸವಾಗಹತ್ತಿತು. ಅವರಿಗೆ ನದೀ ಕಿನಾರೆಯಲ್ಲಿ ಚಿತ್ತಸ್ವಾಸ್ಥ್ಯವೇ ಉಳಿಯಲಿಲ್ಲ. ಕುಸುಮಳ ಮದುವೆಯಾಗಿ ಅವಳು ತನ್ನ ಅತ್ತೆ ಮನೆಗೆ ತೆರಳಿದಳೆಂದು ಅಲ್ಲಿ ಹೆಂಗಸರ ಗುಜಗೋಷ್ಠಿಯಿಂದ ಸುದ್ದಿಯಾಯಿತು.

ವರ್ಷವೊಂದು ಉರುಳಿತು. ಕುಸುಮಳು ಇಂದು ವಿಧವೆ. ಅವಳ ಗಂಡ ಎಲ್ಲಿಯೋ ದೂರದ ಊರಿನಲ್ಲಿ ಏನೋ ಒಂದು ಉದ್ಯೋಗದಲ್ಲಿದ್ದನು. ಕುಸುಮಳ ಮತ್ತು ಅವನ ಭೆಟ್ಟಿಯು ಲಗ್ನವಾದ ಬಳಿಕ ಬರೇ ಒಂದೆರಡು ಬಾರಿಯಾಗಿದ್ದಿತು ಅವನು ಮೃತಹೊಂದಿದ ವರ್ತಮಾನವು ಕೂಡಾ ಯಾರೋ ಬರೆದ ಪತ್ರದಿಂದಾಗಿ ಅವಳಿಗೆ ತಿಳಿಯಿತು. ಬಾಲ್ಯಾವಸ್ಥೆಯ ಎಂಟನೆ ವಯಸ್ಸಿನಲ್ಲಿಯೇ ವೈಧವ್ಯ! ಅವಳು ತನ್ನ ಸೌಭಾಗ್ಯದ ಕುಂಕುಮತಿಲಕವನ್ನು ಉಜ್ಜಿದಳು, ಕಂಕಣಗಳನ್ನು ತೆಗೆದಿಟ್ಟಳು ಮತ್ತು ಗಂಗಾ ತಟಾಕದಲ್ಲಿರುವ ತನ್ನ ಹಿರಿಯರ ಗೃಹವನ್ನು ಸೇರಿದಳು ಅವಳ ಬಾಲಮಿತ್ರಿಯರೆಲ್ಲರಿಗೂ ಲಗ್ನವಾಗಿದ್ದಿತು.

ನೈಸರ್ಗಿಕ ಮಾನದಂತೆ ಗಂಗಾನದಿಗೆ ಹೇಗೆ ನೆರೆ ಏರುತ್ತ ಬರುತ್ತಿತ್ತೋ ಅಂತೆಯೇ ಕುಸುಮಳೂ ದಿನದಿನಕ್ಕೆ ಯೌವನದಲ್ಲಿ ಪದಾರ್ಪಣ ಮಾಡುತ್ತ ಸೌಂದರ್ಯಶಾಲಿ ತರುಣಿಯಾದಳು. ಅವಳ ವಿಚಾರಮಗ್ನ, ಚಿಂತಾಗ್ರಸ್ತ ನೋಟ ಮತ್ತು ಶಾಂತ ಗಂಭೀರವೃತ್ತಿಗಳಿಂದಾಗಿ ಅವಳಲ್ಲಿ ಒಂದು ರೀತಿಯ ವಿರಕ್ತಿಯು ಬಂದ ಹಾಗೆ ನೋಟಕರಿಗೆ ಭಾಸವಾಗುತ್ತಿತ್ತು ಮತ್ತು ಅವಳನ್ನು ಕಂಡೊಡನೆ ಎಂತಹ ಯುವಕನಾದರು ಅರೆಚಣ ಮುಗ್ಧನಾಗುವಷ್ಟು ಸೌಂದರ್ಯ ಆಕೆಯಲ್ಲಿ ಮನೆಮಾಡಿಕೊಂಡಿತ್ತು. ಹೀಗೆ ಹತ್ತು ವರ್ಷಗಳು ಕಳೆದವು ಆದರೆ ಕುಸುಮಳು ತಾರುಣ್ಯಹಂತಕ್ಕೆ ಏರುತ್ತಿರುವುದು ಯಾರ ಚಿತ್ತಕ್ಕೂ ಬರಲಿಲ್ಲ.

ಕಾರ್ತಿಕಮಾಸದೊಳಗಣ ಒಂದು ದಿವಸ ಮುಂಜಾನೆ- ಒಬ್ಬ ಎತ್ತರವುಳ್ಳ ಬಿಳಿಯ ತರುಣ ಸನ್ಯಾಸಿಯು ಗಂಗಾತಟಾಕದಲ್ಲಿಯ ಶಿವಾಲಯದಲ್ಲಿ ಪ್ರಕಟವಾದ. ಅವನು ಯಾವಾಗ ಮತ್ತು ಎಲ್ಲಿಂದ ಬಂದ ಎಂಬುದು ಯಾರಿಗೂ ತಿಳಿಯದ ಸಮಸ್ಯೆಯಾಗಿದ್ದಿತು. ಆ ವರ್ತಮಾನವು ಸಮಾಜದಲ್ಲಿ ಹಬ್ಬಲು ತಡವಾಗಲಿಲ್ಲ. ನೀರಿಗಾಗಿ ನದೀ ತೀರಕ್ಕೆ ಬರುತ್ತಿರುವ ಸ್ತ್ರೀಯರು ತಮ್ಮ ಬಿಂದಿಗೆಗಳನ್ನು ಅಲ್ಲಿಯೇ ಇರಿಸಿ, ಶಿವ ದರ್ಶನಕ್ಕಾಗಿ ದೇವಾಲಯಕ್ಕೆ ಬರುತ್ತಿದ್ದರು—ಮತ್ತು ಪವಿತ್ರ ಗುರುಚರಣಗಳಲ್ಲಿ ತಮ್ಮ ಶಿರಗಳನ್ನು ಬಾಗಿಸಿ ವಂದಿಸುತ್ತಿದ್ದರು. ಅಂತೂ ಶಿವ ಮಂದಿರದಲ್ಲಿ ಜನಜಾಂಗುಳಿಯ ಸಂಗಮ ಅಧಿಕವಾಗತೊಡಗಿತು.

ಸನ್ಯಾಸಿಯ ಕೀರ್ತಿ ಸ್ತ್ರೀಯರಲ್ಲಿ ಬಲು ಬೇಗನೆ ಹಬ್ಬಿಕೊಂಡಿತು. ಹಲವರು ದರ್ಶನಕ್ಕಾಗಿ, ಹಲವರು ಔಷಧಗಳಿಗಾಗಿ, ಮತ್ತೆ ಹಲವರು ಪುರಾಣ ಧರ್ಮಶ್ರವಣಕ್ಕಾಗಿ ಅಲ್ಲಿಗೆ ಬರುತ್ತಿದ್ದರು. ಕೆಲವು ಮಾಸಗಳು ಕಳೆದವು. ಚೈತ್ರಮಾಸದಲ್ಲಿ ಖಗ್ರಾಸ ಸೂರ್ಯಗ್ರಹಣ ಬಂದಿತ್ತು. ದೂರದೂರದ ಊರುಗಳಿಂದಲೂ ಅಂದು ಆ ಪವಿತ್ರ ನದಿಯ ಸ್ನಾನಕ್ಕಾಗಿ ಜನರು ತಂಡತಂಡವಾಗಿ ಬರಹತ್ತಿದರು. ಔದುಂಬರ ವೃಕ್ಷದ ಕೆಳಗೆ ಒಂದು ಜಾತ್ರೆಯೇ ನೆರೆಯಿತು. ಯಾತ್ರಾರ್ಥಿಗಳಲ್ಲಿ ಕೆಲವರು ಸನ್ಯಾಸಿಯ ದರ್ಶನಕ್ಕೆ ಹೋದರು. ಅವರಲ್ಲಿ ಕುಸುಮಳ ಅತ್ತೆಯ ಊರಿನ ಮಂದಿಯೂ ಬಹಳವಿದ್ದರು.

ಪ್ರಾತಃಸಮಯ ಸನ್ಯಾಸಿ ಜಪಮಾಲೆ ಹಿಡಿದುಕೊಂಡು ನದೀ ತಟಾಕದಲ್ಲಿ ಧ್ಯಾನ ಮಗ್ನನಾಗಿದ್ದ. ಆಗ ಯಾತ್ರಾರ್ಥಿ ಸ್ತ್ರೀಯರಲ್ಲಿ ಒಬ್ಬಾಕೆ ಆಶ್ಚರ್ಯಚಕಿತಳಾಗಿ ಇನ್ನೊಬ್ಬಳೊಡನೆ ಹೇಳಿದಳು:— "ಜಾನಕಿ! ಇವನು ನಮ್ಮ ಕುಸುಮಳ ಗಂಡನಲ್ಲವೆ ?" "ಹೌದು! ನಮ್ಮ ಚಟರ್ಜಿಯವರ ಮಗನಿವನು!" ಇನ್ನೊಬ್ಬಳು ಮಾತಿಗೆ ಮಾತು ಕೊಟ್ಟಳು "ಆದರೆ ಅವನು ಈ ಮೊದಲೇ ಸತ್ತಿದ್ದಾನಷ್ಟೆ?" ಮೂರನೆಯವಳು ಹೇಳಿದಳು. "ಅವನಿಗೆ ಇಷ್ಟು ಗಡ್ಡವಾದರೂ ಎಲ್ಲಿಂದ?!" ನಾಲ್ಕನೆಯವಳೆಂದಳು.

ನಂತರ ಯಾರೂ ವಿಚಾರ ಮಾಡಲಿಲ್ಲ. ಆದರೆ ವಿಧವೆ.......?

ಅಂದು ಪೂರ್ಣಿಮೆಯ ರಾತ್ರಿ ಹಿಟ್ಟು ಚೆಲ್ಲಿದ ಹಾಗೆ ತಿಂಗಳು ಬಿದ್ದಿದೆ. ಕುಸುಮಳು ಏಕಾಂಗಿಯಾಗಿ ಬಂದು ಗಂಗಾತಟಾಕದಲ್ಲಿ ಕುಳಿತಳು ನದೀ ಘಟ್ಟದ ಮೇಲೆ ಬೇರೆ ಯಾರೂ ಕಾಣುತ್ತಿರಲಿಲ್ಲ. ರಾತ್ರಿಹುಳುಗಳ ಕರ್ಕಶ ಸಂಗೀತ ಸುರುವಾಗಿದ್ದಿತು. ದೇವಮಂದಿರದೊಳಗಿನ ಘಂಟಾನಾದವು ಗಾಳಿಯಲ್ಲಿ ಲೀನವಾಗುತಿತ್ತು. ಅದರ ಧ್ವನಿಯು ನದಿಯ ಆಚೆತೀರಕ್ಕೆ ಹೋಗಿ ಪ್ರತಿಧ್ವನಿಸುತ್ತಿತ್ತು. ಚಂದಿರನ ಪ್ರಕಾಶವು ನದಿಯ ನೀರಿನ ಮೇಲೆ ಬಿದ್ದು ರಜತ ರೇಖೆಗಳಂತೆ ಹೊಳೆಯುತ್ತಿದ್ದಿತು. ಮೇಲಿನಿಂದ ಶಿವಮಂದಿರ ಸ್ವಲ್ಪ ದೂರದಲ್ಲಿ ಕಾಶೀಪಟ್ಟಣದ ಗಗನಚುಂಬಿತ ಶಿಲ್ಪಕಲಾ ಕಟ್ಟಡಗಳು. ಒಂದು ದಿಕ್ಕಿಗೆ ರಾತ್ರಿಯ ವನಸ್ತ್ರೀಸೌಂದರ್ಯ-ಅದರಲ್ಲಿಯೂ ನದೀ ತೀರ! ಎಂತಹ ಸೊಬಗು! ಅದೆಂತಹ ಆನಂದ !!

ಮೆಲ್ಲಮೆಲ್ಲನೆ ಸನ್ಯಾಸಿ ಶಿವಮಂದಿರದಿಂದ ಹೊರಬಿದ್ದ. ನದೀಘಟ್ಟಕ್ಕೆ ಅನತಿದೂರದಲ್ಲಿ ಯಾರೋ ಯುವತಿಯೊಬ್ಬಳು ಕುಳಿತಿದ್ದಂತೆ ಸನ್ಯಾಸಿಗೆ ತೋರಿತು. ಅವನು ಹಿಂತಿರುಗಿ ಹೋಗುವುದರಲ್ಲಿದ್ದ—ಆದರೆ ಅಷ್ಟರಲ್ಲಿ ಕುಸುಮಳು ನೋಡಿಬಿಟ್ಟಳು. ಅವಳ ತಲೆಯ ಮೇಲಿನ ಸೆರಗು ಹೆಗಲ ಮೇಲೆ ಜಾರಿತು. ಈಗ ಅವಳ ಸೌಂದರ್ಯ-ಸೆಳೆತವು ಬಹಳ ಮನಮೋಹಕವಾಗಿದ್ದಿತು !

ಒಂದು ನೀರ್ಕಾಗೆ ವಿಕಾರವಾಗಿ ಕೂಗುತ್ತ ಆಕೆಯ ತಲೆಯ ಮೇಲಿಂದ ಹಾರಿಹೋಯಿತು. ಅವಳು ಸುಧಾರಿಸಿಕೊಂಡು ತನ್ನ ಮಸ್ತಕವನ್ನು ಸನ್ಯಾಸಿಯ ಚರಣಗಳ ಮೇಲೆ ಇಟ್ಟಳು. ಅವನು ಆಶೀರ್ವಾದ ಕೊಡುತ್ತ ಕೇಳಿದ—ನೀವು ಯಾರು?"

"ನಾನು.......ನಾನು... ಕು....ಸು....ಮ..." ಅವಳು ಮೆಲ್ಲನೆ ನುಡಿದಳು.

—ಇಬ್ಬರೂ ಆ ರಾತ್ರಿ ಏನನ್ನೂ ಮಾತನಾಡಲಿಲ್ಲ. ಕುಸುಮಳು ಮಾಲುತ್ತ ಮಂದಗತಿಯಿಂದ ಮನೆ ಸೇರಿದಳು. ಅವಳ ಮನೆ ಹತ್ತಿರವೇ ಇತ್ತು. ಸನ್ಯಾಸಿಯು ಮಾತ್ರ ಬಹಳ ರಾತ್ರಿಯ ತನಕ ಘಟ್ಟದ ಮೇಲೆ ಕುಳಿತು ವಿಚಾರ ಮಾಡುತ್ತಿದ್ದ. ಪಶ್ಚಿಮ ದಿಕ್ಕಿಗೆ ಇದ್ದ ಸನ್ಯಾಸಿಯ ನೆರಳು ಪೂರ್ವಕ್ಕೆ ಬದಲಿಸಿದೊಡನೆ ಅವನು ಅಲ್ಲಿಂದ ಎದ್ದು ಮಂದಿರಪ್ರವೇಶ ಮಾಡಿದ......

....ಆ ಮೇಲೆ ದಿನಾಲೂ ಕುಸುಮಳು ಸನ್ಯಾಸಿಯ ದರ್ಶನಕ್ಕಾಗಿ ಮಂದಿರಕ್ಕೆ ಬರತೊಡಗಿದಳು. ಅವನು ಪವಿತ್ರ ಧರ್ಮಗ್ರಂಥಗಳನ್ನು ಪಠಿಸುತ್ತಿದ್ದ— ಆಕೆ ತಲ್ಲೀನಳಾಗಿ ಅವನ್ನು ಶ್ರವಣಮಾಡುತ್ತಿದ್ದಳು. ಬೆಳಿಗ್ಗೆ ಸ್ನಾನ-ಸಂಧ್ಯೆ-ಪೂಜೆಗಳಾಗುವ ತನಕ ಅವನು ಕುಸುಮಳನ್ನು ಮಾತನಾಡಿಸುತ್ತಿದ್ದ ಮತ್ತು ಧರ್ಮಬೋಧೆ ಹೇಳುತ್ತಿದ್ದ. ಅವಳಿಗೆ ಅದರ ಸಂಪೂರ್ಣ ಅರ್ಥವಾಗುತ್ತಿರಲಿಲ್ಲ. ಸನ್ಯಾಸಿಗೆ ಬೇಕಾದ ಪತ್ರ-ಪುಷ್ಪ, ಗಂಗಾಜಲವನ್ನು ಆಕೆಯೇ ನಿತ್ಯವೂ ತಂದುಕೊಡುತ್ತಿದ್ದಳು.

ಚಳಿಗಾಲ ಕಳೆಯುತ್ತ ಬಂದಿತ್ತು. ತಂಪಾದ ಗಾಳಿ ಬೀಸಲು ಪ್ರಾರಂಭವಾಯಿತು. ಮಧ್ಯೆ ಮಧ್ಯೆ ಬಿಸಿಯಾದ ಹವೆ ಬೀಸಿ ತಂಪಿನ ಶೀತವನ್ನು ತುಸು ಕಡಿಮೆ ಮಾಡುತ್ತಿತ್ತು. ರಸಿಕ ದಂಪತಿಗಳು ಮತ್ತು ರಸಿಕ ಯುವಕ-ಯುವತಿಯರು ತಮ್ಮ ಚಿಕ್ಕ ದೋಣಿಗಳನ್ನು ಗಂಗೆಯಲ್ಲಿ ತೇಲಬಿಟ್ಟು ಸ್ವೈರ ವೃತ್ತಿಯಿಂದ ಅವುಗಳನ್ನು ನಡೆಸುತ್ತ "ಕೃಷ್ಣ....ಕ...ನ್ಹೈ...ಯಾ...." ಹಾಡುತ್ತಲಿದ್ದ ದಿವಸಗಳು....!

ತಿರುಗಿ ಅವರಿಬ್ಬರು ಒಂದು ರಾತ್ರಿ ಅದೇ ನದೀ ಘಟ್ಟದ ಮೇಲೆ ಸಂಧಿಸಿದರು. ಕುಸುಮಳು ಮಾತು ಮೊದಲು ಮಾಡಿದಳು:— "ಸ್ವಾಮಿನ್, ತಾವು ನನಗೆ ಹೇಳಿ ಕಳುಹಿಸಿದಿರೆ?"

"ಹೌದು; ಇತ್ತೀಚೆಗೆ ನೀನು ನನಗೆ ಕಾಣಸಿಕ್ಕುವುದೇ ಇಲ್ಲ. ನಿನಗೆ ದೇವರ ಮೇಲೆ [illegible] ಹುಟ್ಟಿರಬಹುದು?" ಸನ್ಯಾಸಿ ಕೇಳಿದ. ಮೌನ.

"ನಿನಗೆ ಏನಾಯಿತೆಂದು ಹೃದಯಬಿಚ್ಚಿ ಹೇಳಬಾರದೆ ನನ್ನಲ್ಲಿ?" ಅವನು ತಿರುಗಿ ಕೇಳಿದ.

ಮುಖವನ್ನು ಹಿಂದೆ ತಿರುಗಿಸಿ ನಿಟ್ಟುಸುರನ್ನು ಬಿಡುತ್ತ ಅವಳು ಹೇಳಿದಳು— "ಮಹಾಸ್ವಾಮಿನ್, ನಾನು ಪಾಪಿ! ತಪ್ಪಿದೆ."

"ನಿನ್ನ ಹೃದಯದಲ್ಲಿ ಅಶಾಂತಿ ನೆಲಸಿದೆಯೆಂಬುದನ್ನು ನಾನು ಬಲ್ಲೆ" ಅವನು ಉದ್ಗಾರ ತೆಗೆದ. ಅವಳು ದುಃಖವನ್ನು ತಡೆಯಲಾರದೆ ನದೀ ದಂಡೆಯ ಶಿಲೆಯ ಮೇಲೆ ಕುಳಿತು ಸನ್ಯಾಸಿಯ ಪಾದಗಳ ಮೇಲೆ ಎರಗಿದಳು. ಅವನು ತುಸು ಹಿಂದೆ ಸರಿದು ಹೇಳಿದ— "ನಿನಗೆ ಏನಾಗುತ್ತಿದೆ ? ನಿನ್ನ ಮನಸ್ಸಿನಲ್ಲಿ ಏನಿದೆಯೆಂಬುದನ್ನು ತಿಳಿಸು. ಆಂದರೆ ನಾನು ನಿನಗೆ ಮಾರ್ಗದರ್ಶನ ಮಾಡಿಸಿಯೇನು ಮತ್ತು ನಿನಗೆ ಶಾಂತತೆ ಲಭಿಸೀತು"

ಅವಳು ಬಿಕ್ಕಿ ಬಿಕ್ಕಿ ಅಳುತ್ತ ಮೆಲ್ಲನೆ ಹೇಳತೊಡಗಿದಳು— "ತಮಗೆ ಕೇಳಬೇಕೆಂದಿದ್ದಲ್ಲಿ ಹೇಳುತ್ತೇನೆ. ತಮಗೆ ಅದು ತಿಳಿದಿರಬಹುದು. ನಾನು ಒಂದು ವ್ಯಕ್ತಿಯನ್ನು ದೇವರೆಂದು ಭಾವಿಸಿ ಪೂಜೆ ಮಾಡಿದೆ." ಅವಳು ಮುಂದೆ ಹೇಳಿದಳು. "ಭಕ್ತಿಯಿಂದ ನನ್ನ ಹೃದಯ ತುಂಬಿ ಬಂತು. ಆದರೆ ಒಂದು ರಾತ್ರಿ ನನ್ನ ದೇವರು ನನ್ನ ಕೈಗಳನ್ನು, ತನ್ನ ಪ್ರೇಮಹಸ್ತದಿಂದ ಚುಂಬಿಸುತ್ತ ನನ್ನಲ್ಲಿ ಮಾತನಾಡುತ್ತ, ಉಪವನದಲ್ಲಿ ಆಡ್ಡಾಡುತ್ತಿದ್ದಂತೆ ಕನಸು ಕಂಡೆ. ಆ ಸ್ವಪ್ನ ಇನ್ನೂ ನನ್ನ ಹೃದಯವನ್ನು ಕೊರೆಯುತ್ತಿದೆ!"

—೬ನೇ ಪುಟದಲ್ಲಿ

"ಒಡಕು-ಪಿಡುಗಿನ ಹಿತದಲ್ಲಿಯೆ ಕೆಡದಿರುವ
ನರಪೇತರು
ಬಾಡಿ ಬತ್ತಲಿ" ಎಂದೆ ಎನ್ನಯ ಅಂತರಾತ್ಮನ
ನುಡಿಸಿರು.
ಖಡುಗ ಕೈಯಲಿ ಹಿಡಿದಿಹೆ-ನರ
ಹೇಡಿಗಳ ಇರಿದೊಗೆಯುವೆ.

ಮುಸ್ಲಿಮರು ಹಿಂದುಗಳೊಳಿಲ್ಲದ ವೈರವನು
ಪ್ರಜ್ವಲಿಸುತ
ದೇಶವೊಡೆವರ ನಾಡ ಭಕ್ತಿಯ ಸೋಗು ಜನತೆಯ
ಮಣಿಸುತ
ಕಣ್ಗೆ ಮಣ್ಣನು ಉಗ್ಗಿದೆ-ಆದೆ
ಮಣ್ಣನವರಿಗೆ ಉಗ್ಗುವೆ.

ಯಾವ ಪಾಕಿಸ್ತಾನವೊ ಇದು ಯಾವ
ಹಿಂದುಸ್ತಾನವೊ!
ಎನ್ನ ನಿನ್ನಯ ಸ್ಥಾನವೆನ್ನಲು ಮಾತ್ರ ನುಡಿಗಳು
ಬರುವವೊ!
ಸ್ವಾರ್ಥವಿದಕೆ ಮೂಲವು-ನಿಃ
ಸ್ವಾರ್ಥಕಿಲ್ಲವೆ ಕಾಲವು?

—ಪಿ. ಟಿ. ಕುಲಕರ್ಣಿ

## ಸಂಪಾದಕೀಯ

# ಟೀಕೆ-ಟಿಪ್ಪಣಿಗಳು

### ಮತದಾರರ ಕರ್ತವ್ಯ

ಮುಂಬಯಿ ಶಾಸನ ಸಭೆಯ ಪ್ರಾಂತಿಕ ಚುನಾವಣೆಗಳು ಬಹಳ ಸಮೀಪಿಸಿರುತ್ತವೆ. ಈ ಪತ್ರದ ಮುಂದಿನ ವಾರದ ಸಂಚಿಕೆಯು ನಿಮ್ಮ ಕೈಸೇರುವಷ್ಟರೊಳಗೆ ಮತದಾನವು ಪ್ರಾರಂಭವಾಗಿರುತ್ತದೆ. ಅದುದರಿಂದ ಮತದಾರರ ಕರ್ತವ್ಯವನ್ನು ಕುರಿತು ಇಲ್ಲಿ ಒಂದೆರಡು ಮಾತುಗಳನ್ನು ಬರೆಯುವದು ಅಪ್ರಸ್ತುತವಾಗಲಿಕ್ಕಿಲ್ಲವೆಂದು ನಮ್ಮ ಭಾವನೆ. ಶಾಸನ ಸಭೆಗಳ ಪ್ರವೇಶದಿಂದ ಸ್ವಾತಂತ್ರ್ಯ ಸಿಗುವದಿಲ್ಲವೆಂದು ನಿಶ್ಚಿತವಿದ್ದರೂ ಕಾಂಗ್ರೆಸು ಚುನಾವಣೆ ರಂಗವನ್ನು ಏಕೆ ಪ್ರವೇಶಿಸಿತು ಎಂಬುದು ಗೊತ್ತಿರಲಿಕ್ಕೆ ಸಾಕು. ಆದರೂ ಓದುಗರ ನೆನಪಿಗಾಗಿ ಇಲ್ಲಿ ಇನ್ನೊಮ್ಮೆ ಹೇಳಬಯಸುತ್ತೇವೆ. (೧) ಸ್ವಾರ್ಥ ಸಾಧಕರು ಹಾಗು ಬ್ರಿಟಿಶ ಸರಕಾರದ ಬಗಲಗೂಸುಗಳು ಶಾಸನ ಸಭೆಯಲ್ಲಿ ಪ್ರವೇಶಿಸಿ ದಾಸ್ಯ ಶೃಂಖಲೆಯನ್ನು ಮತ್ತಷ್ಟು ಬಿಗಿಮಾಡದಂತೆ ತಡೆಯಲು (೨) ಪ್ರವೇಶಿಸಿದ ನಂತರ ಶಾಸನ ಸಭೆಯ ಕಾರ್ಯಕ್ರಮವನ್ನು ಕಾಂಗ್ರೆಸ ವಿಧಾಯಕ ಕಾರ್ಯಕ್ಕೆ ಸಾಧ್ಯವಿದ್ದಷ್ಟು ಹೊರಳಿಸಲು. ಕಾಂಗ್ರೆಸಿಗರು ಅಸಹಕಾರ ಹೂಡಿದಾಗ ಅಥವಾ ತುರಂಗಗಳಿಗೆ ಹೋದಾಗ "ಜೀ, ಹುಜೂರ್" ಜನರು ಶಾಸನ ಸಭೆ ಪ್ರವೇಶಿಸಿ, ಅಧಿಕಾರ ಸ್ಥಳಗಳನ್ನು ಆಕ್ರಮಿಸಿ ಹಿಂದುಸ್ತಾನಕ್ಕೆ ಅದೆಷ್ಟು ಹಾನಿ ಮಾಡಿರುವರೆಂಬವನ್ನು ಹೇಳುವದು ಬೇಡ. ಈ ಸಂಧಿ ಕಾಲದಲ್ಲಿ ಅಂಥವರಿಂದ ಇನ್ನಷ್ಟು ಹಾನಿಯಾಗಬಾರದೆಂದಿದ್ದರೆ ಕಾಂಗ್ರೆಸು ಅವರನ್ನು ತಡೆಯುವದು ಅವಶ್ಯವಿರುತ್ತದೆ. ಇನ್ನು ಶಾಸನ ಸಭೆ ಪ್ರವೇಶಿಸಿದ ಮೇಲೆ ಕಾಂಗ್ರೆಸು ಏನು ಮಾಡಬಲ್ಲದೆಂಬುದು ೧೯೩೭ ರಿಂದ ೧೯೩೯ ರ ವರೆಗೆ ಅದರ ಮಂತ್ರಿಮಂಡಲಗಳು ನೆರವೇರಿಸಿದ ಆಶ್ಚರ್ಯಕಾರಕ ಕಾರ್ಯವು ಸಾಕ್ಷಿಯಾಗಿರುವದು. ಇದಲ್ಲದೆ ಕಾಂಗ್ರೆಸು ಈ ಸಲ ಇನ್ನೊಂದು ಮಹಾ ಉದ್ದೇಶವನ್ನಿಟ್ಟುಕೊಂಡಿದೆ. ಸ್ವಾತಂತ್ರ್ಯ ಹೋರಾಟವನ್ನು ಪೂರ್ತಿಗೊಳಿಸುವದೇ ಅದು. ಕಾಂಗ್ರೆಸ್ಸಿನ ಅವಿಶ್ರಾಂತ ಪ್ರಯತ್ನದಿಂದ ಸ್ವಾತಂತ್ರ್ಯ ಹೋರಾಟ ಮುಗಿಯುತ್ತ ಬಂದಿರುವದು. 'ಕೊನೆಯ' ದಾಳಿ ಉಳಿದಿದೆ. ಅದನ್ನು ಪ್ರಾರಂಭಿಸಿ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳುವದು ಬಾಕಿ ಇದೆ. ಈ ಚುನಾವಣೆಗಳು ಆ ದಾಳಿಯ ಮೊದಲನೆ ಹೆಜ್ಜೆ. ಅದುದರಿಂದ ಇದಕ್ಕೆ ಬೆಂಬಲ ಕೊಡುವದು ಸ್ವಾತಂತ್ರ್ಯ ಸಂಪಾದನೆಗೆ ನೆರವು ನೀಡಿದಂತೆ. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅನೇಕರು ಪ್ರಾಣಾರ್ಪಣ ಮಾಡಿದ್ದಾರೆ; ರಕ್ತವನ್ನು ಸುರಿಸಿದ್ದಾರೆ. ಈಗ ಅಂಥ [illegible]ವೇನೂ ಇಲ್ಲ. ನಿಮಗಿದ್ದ ಮತಗಳನ್ನು ಕಾಂಗ್ರೆಸ ಹುರಿಯಾಳುಗಳಿಗೆ ಕೊಟ್ಟರೆ ಸಾಕು. ಬಹಳವಾದರೆ ನಿಮ್ಮೂರಿಂದ ಮತಗಟ್ಟೆಗಳಿಗೆ ನಿಮ್ಮ ವೆಚ್ಚದಿಂದ ಅಥವಾ ಶ್ರಮದಿಂದ ಬರಬೇಕಾಗುವದು. ಆದರೆ ಅದು ನಿಮ್ಮ ಕರ್ತವ್ಯವೆಂದೂ ಸ್ವಾತಂತ್ರ್ಯ ಸಂಪಾದನೆಗೆ ಇಷ್ಟೊಂದು ಸೇವೆ ನಿಮ್ಮಿಂದ ಅವಶ್ಯವೆಂದೂ ನಾವು ಬೇರೆ ಹೇಳಬೇಕಾಗಿಲ್ಲ.

### ಶಿಕ್ಷಕರ ಸಂಪು

ಮುಂಬೈ ಸೆಕ್ರೆಟರಿಯಟ್‌ದಲ್ಲಿರುವ ಸಮಸ್ತ ವಿದ್ಯಾದೇವತೆಗಳನ್ನು ಹೊಟ್ಟೆ ತುಂಬ ಅನ್ನಕ್ಕಾಗಿ ಮನಕರಗುವಂತೆ ಹಲುಬಿದರೂ ಫಲ ದೊರೆಯದ್ದರಿಂದ ಪ್ರಾಂತದಲ್ಲಿರುವ ಸುಮಾರು ೪೫೦೦೦೦ ಪ್ರಾಥಮಿಕ ಶಾಲಾ ಶಿಕ್ಷಕರು ಕೊನೆಯ ಅಸ್ತ್ರವೆಂದು ಸಂಪು ಹೂಡುವ ನಿರ್ಧಾರ ಮಾಡಿರುತ್ತಾರೆ. ಈ ಪತ್ರವು ನಿಮ್ಮ ಕೈಸೇರುವ ಹೊತ್ತಿಗೆ ಸಂಪು ಪ್ರಾರಂಭವಾಗಿ ನಾಲ್ಕು ದಿನಗಳಾಗುತ್ತದೆ. ಶಿಕ್ಷಕರ ಈ ನಿರ್ಣಯವು ಶೋಚನೀಯವಾಗಿದ್ದರೂ ನ್ಯಾಯ ಪಡೆಯುವದಕ್ಕೆ ಮಾಡಲೇಬೇಕಾ[illegible]. ಇವಕ್ಕೆ ಹೊಣೆಗಾರರು ಅವರಲ್ಲ; ಅವರಿಗೆ ಅಂಥ ಸ್ಥಿತಿ ತಂದುಕೊಟ್ಟವರದು. ಕಳೆದ ೩೫ ವರ್ಷಗಳಿಂದ ಅವರು ದಿನೆ ದಿನೆ ಕ್ಷೀಣವಾಗುತ್ತ ಬಂದಿದ್ದಾರೆ. ಉಳಿದವರ ಸಂಬಳಗಳು ಏರಿದ್ದರೆ ಇವರದು ಇಳಿದಿರುತ್ತವೆ. ೪೦ ರೂ. ಪ್ರಾರಂಭಿಕ ಸಂಬಳವಿರಬೇಕೆಂದು ಸಾಕೆ-ಪರಾಂಜಪೆ ಸಮಿತಿಯವರು ಸೂಚಿಸಿದ್ದರೆ ಈಗ ಅದು ಪರಮಾವಧಿ ಸಂಬಳವಾಗಿರುವದು. ಮೇಲೆ ಯುದ್ಧದ ದಳ್ಳುರಿ. ಶಿಕ್ಷಕರು ಸ್ಥಾನಿಕ ಸಂಸ್ಥೆಗಳನ್ನು ಬೇಡಿಕೊಂಡದ್ದಾಯಿತು; ಸರಕಾರವನ್ನು ಪ್ರಾರ್ಥಿಸಿದ್ದಾಯಿತು. ಆದರೆ ಅವರು ಒಬ್ಬರ ಮೇಲೊಬ್ಬರು ನೆವ ಹಾಕಿ ಪಾರಾದರು. ಇನ್ನು ಕೆಲವು ಸಂಸ್ಥೆಗಳು ಶಿಕ್ಷಕರ ಕರುಣಾಜನಕ ಪರಿಸ್ಥಿತಿಯನ್ನು ಕಂಡು ಹೆಚ್ಚು ಸಂಬಳ ಕೊಡಲು ಮುಂದೆ ಬಂದರೆ ಸರಕಾರದವರು ಅವರಿಗೆ ಮುಸುಕಿನಲ್ಲಿ ಡೊಣ್ಣೆ ಪೆಟ್ಟು ಕೊಟ್ಟು ಕುಳ್ಳಿರಿಸಿದ್ದಾರೆ. ಗಂಡ-ಹೆಂಡಿರ ಜಗಳದಲ್ಲಿ ಕೂಸು ನುಗ್ಗಾದಂತೆ ಇವರಿಬ್ಬರ ತಿಕ್ಕಾಟದಲ್ಲಿ ಶಿಕ್ಷಕರು ಮಾತ್ರ ಹಣ್ಣಾದರು. ಆದರೆ ಸಂಪಿನ ನಿರ್ಧಾರ ಮಾಡಿದ ಕೂಡಲೇ ಅದೇ ಸರಕಾರ ಈಗ ಕಣ್ಣೊತ್ತಿ ಸರಕಾರಿ ಪ್ರಮಾಣದಂತೆ ತುಟ್ಟಿಭತ್ತೆ ಕೊಡಲು ಸೂಚಿಸಿ ಈ ಹಣವನ್ನು ಹೊಸ ಕರ ಹೇರಿ ತುಂಬಿಕೊಳ್ಳಬೇಕೆಂದು ಸ್ಥಾನಿಕ ಸಂಸ್ಥೆಗಳಿಗೆ ಸೂಚಿಸಿದ್ದಾರೆ. ಹೇಗಿದೆ ಸಹಾನುಭೂತಿ! ಈ ತುಟ್ಟಿಭತ್ತೆಯನ್ನು ಸಹ ಹಿಂದಿನಿಂದ ಅಂದರೆ ಇನ್ನುಳಿದ ಸರಕಾರಿ ನೌಕರರಿಗೆ ಕೊಡಮಾಡಿದಂದಿನಿಂದ ಕೊಟ್ಟಿದ್ದರೆ ಕೆಲಮಟ್ಟಿಗಾದರೂ ನ್ಯಾಯದಾನ ಮಾಡಿದಂತಾಗುತ್ತಿತ್ತು. ಅದು ಸಹ ಇಲ್ಲ. ಪ್ರಾಥಮಿಕ ಶಿಕ್ಷಕರ ಈಗಿನ ಸಂಬಳ ರೂ. ೨೦ ರಿಂದ ೪೦. ಹಮಾಲರು, ಪೋರ್ಟರರು ಸಹ ಇದಕ್ಕೂ ಹೆಚ್ಚು ದುಡಿಯುತ್ತಾರೆ. ಈ ಅಲ್ಪವೇತನದಿಂದ ಅವರ ಜೀವನ ಸರ್ವಸ್ವವನ್ನು ಸೂರೆಗೊಳ್ಳುವದು ಯಾವ ಧರ್ಮ? ೩೦ ರಿಂದ ೧೨೦ ರೂ. ಈ ಸ್ಕೇಲಿನಂತೆ ಸಂಬಳ ಸಿಕ್ಕಬೇಕೆಂದು ಅವರ ಬೇಡಿಕೆ ಇದೆ. ಇದು ಅನ್ಯಾಯವೆಂದು ಯಾರೂ ಹೇಳಲಾರರು. ಶಿಕ್ಷಕರ ಸಂಪಿಗೆ ಈಗ ಸುತ್ತಲೂ ದೊರೆಯುತ್ತಿರುವ ಬೆಂಬಲವು ಇದಕ್ಕೆ ಸಾಕ್ಷಿಯಾಗಿರುವದು. ಇನ್ನು, ಈ ಸಂಪನ್ನು ಲೋಕನಿಯುಕ್ತ ಮಂತ್ರಿಮಂಡಲ ಬರುವ ವರೆಗೆ ಮುಂದಕ್ಕೆ ಹಾಕಬೇಕೆಂದು ಕೆಲವು ಹಿತವಾದಿಗಳು (ಯಾರ?) ಹೇಳಬಂದಿದ್ದಾರೆ. ಹಾಗೆ ಮಾಡಿದಲ್ಲಿ ಸರಕಾರದ ನಿರಂಕುಶಾಧಿಕಾರಕ್ಕೆ ಮತ್ತಷ್ಟು ಪುಟ ದೊರೆಯುವದು. ಈಗಿನದು ಹೊಣೆಗೆಟ್ಟ ಸರಕಾರ. ಮನಸಿಗೆ ಬಂದುದನ್ನು ಮಾಡುತ್ತದೆ. ಕೋಟಿಗಟ್ಟಲೆ ಹಣ ಸುರಿಯಬೇಕಾದ ಯುದ್ಧೋತ್ತರ ಯೋಜನೆ, ಕೋಟಿಗಟ್ಟಲೆ ಹಣ ಅವಶ್ಯವಿರುವ ರೇಲ-ರಸ್ತೆ ಸಂಯುಕ್ತೀಕರಣ ಯೋಜನೆ ಹಾಗೂ ಜನರಿಂದ ಕೋಟಿಗಟ್ಟಲೆ ಹಣ ಸೆಳೆಯುವ ಮಾರಾಟ ಕರ- ಇವುಗಳನ್ನು ಲೋಕನಿಯುಕ್ತ ಮಂತ್ರಿಮಂಡಲಗಳು ಬರುವ ವರೆಗೆ ತಡೆಯಿರೆಂದು ಜನರು ಕೇಳಿದರೆ ಇಲ್ಲವೆನ್ನುವರು. ಆದರೆ ಶಿಕ್ಷಕರ ಹಸಿವನ್ನು ತಡೆಯಲಿಕ್ಕೆ ಉಪದೇಶಿಸುತ್ತಾರೆ. ಇದಾವ ನ್ಯಾಯ? ಪ್ರಾಥಮಿಕ ಶಾಲಾ ಶಿಕ್ಷಕರ ಸಂಬಳ ಸಮಸ್ಯೆಯನ್ನು ಈಗಲೇ ಬಗೆಹರಿಸುವದು ಅತ್ಯಂತ ಅವಶ್ಯವಿರುವದು.

### ಸೀದಾದಲ್ಲಿ ಕತ್ತರಿ

ಮುಂಬೈ ಸರಕಾರದವರು ಇದೇ ಫೆಬ್ರುವರಿ ೨೧ ರಿಂದ ಸೀದಾ ಪ್ರಮಾಣದಲ್ಲಿ ನೂರಕ್ಕೆ ೨೫ರಷ್ಟು ಕಡಿಮೆ ಮಾಡಿದ್ದಾರೆ. ಈ ಕತ್ತರಿ ಒಂದಿಲ್ಲೊಂದು ದಿನ ಬರುವದೆಂದು ನಿಶ್ಚಿತವಿದ್ದರೂ ಇಷ್ಟು ಬೇಗ ಜಾರಿಯಲ್ಲಿ ಬರಬಹುದೆಂಬ ನಿರೀಕ್ಷೆ ಇದ್ದಿಲ್ಲ. ಆಹಾರ ಕೊರತೆಯನ್ನು ಸಮಸ್ತ ಭಾರತೀಯರಿಗೂ (ಬ್ರಿಟಿಶ್ ಹಿಂದುಸ್ತಾನದಲ್ಲಿರುವರಿಗೆ) ಸರಿಯಾಗಿ ಹಂಚಲಾಗುವದೆಂದು ವಾಯಿಸರಾಯರು ಆಶ್ವಾಸನ ಕೊಟ್ಟದ್ದರಿಂದ ಭಾರತದಲ್ಲಿ ಈ ಕತ್ತರಿ ಏಕಕಾಲದಲ್ಲಿ ಪ್ರಾರಂಭಿಸಲ್ಪಡುವದೆಂಬ ಆಶೆ ಇತ್ತು. ಆದರೆ ಎಂದಿನಂತೆ ಕೊರತೆ ಪ್ರಾಂತಗಳು ಹೆಚ್ಚು ಕಷ್ಟ ಸಹಿಸಬೇಕಾಗಿದೆ. ಇರಲಿ, ಈ ಕತ್ತರಿಯನ್ನು ಪ್ರಯೋಗಿಸುವಾಗ, ಮುಂಬೈ ಸರಕಾರದವರು ಜನರಿಗೆ ಆಶ್ವಾಸನ ರೂಪವಾಗಿ ಏನೂ ಹೇಳದಿರುವದು ಆಶ್ಚರ್ಯಕರವಾಗಿದೆ. "ಆಹಾರ ಕಡಿಮೆಯಾಗಿದ್ದರಿಂದ ಕತ್ತರಿ ಪ್ರಯೋಗಿಸಲಾಗಿದೆ"ಯೆಂದು ಒಂದು ವಾಕ್ಯದಲ್ಲಿ ಎಲ್ಲವನ್ನೂ ಮುಗಿಸಿಬಿಟ್ಟಿದ್ದಾರೆ. ಮುಂಬಯಿ ಪ್ರಾಂತದ ಆಹಾರ ಪರಿಸ್ಥಿತಿ ಹೀಗೇಕಾಯಿತು? ಕೊರತೆ ಬೀಳಬಹುದಾದ ಆಹಾರವನ್ನು ತುಂಬಿಕೊಳ್ಳಲು ಯಾವ ಪ್ರಯತ್ನ ಕೈಕೊಳ್ಳಲಾಯಿತು? ಅಧಿಕ ಆಹಾರ ಬೆಳೆಯಿರಿ ಪ್ರಚಾರದಿಂದ ಯಾವ ಲಾಭವಾಯಿತು? ಪ್ರಜರ ಕಾಲುಭಾಗ ಹಸಿದ ಹೊಟ್ಟೆಯನ್ನು ತುಂಬಿಸಲು ಯಾವ ಉಪಾಯ ಕೈಕೊಳ್ಳಲಾಗುವದು? ಎಂದು ಮುಂತಾದ ಅವಶ್ಯಕ ಸಂಗತಿಗಳನ್ನು ಅವರು ಜನತೆಯ ಮುಂದಿಡದಿರುವದು ಶೋಚನೀಯವಾಗಿದೆ. ತದ್ವಿರುದ್ಧವಾಗಿ ಪರಪ್ರಾಂತ ಮತ್ತು ಪರದೇಶಗಳಲ್ಲಿ ತಪ್ಪು ಕಲ್ಪನೆಯಾಗುವಂಥ ಮಾತುಗಳನ್ನು ತಮ್ಮ ಪ್ರಕಟಣೆಯಲ್ಲಿ ಸೇರಿಸಿರುವರು. "ಈ ಕಡಿತದಿಂದ ಉಳಿಯುವ ಧಾನ್ಯ ನವಂಬರ ಅಂತ್ಯದ ವರೆಗೆ ನಮ್ಮ ಕೊರತೆಯನ್ನು ನೀಗಿಸಬಹುದು ಮತ್ತು ಅಷ್ಟೊತ್ತಿಗೆ ಹೊಸ ಬೆಳೆ ಕೈಗೆ ಬರುತ್ತದೆ" ಎಂದು ಹೇಳಿದ್ದಾರೆ. ಅಂದರೆ ಅಲ್ಲಿಯ ವರೆಗೆ ಮುಂಬಯಿ ಪ್ರಜರು ಅರೆಹೊಟ್ಟೆಯಿಂದ ಜೀವಿಸಬೇಕೆಂದು ಇವರ ಅಭಿಪ್ರಾಯವೋ? ಮುಂಬೈ ಸರಕಾರದ ಅಧಿಕ ಆಹಾರ ಬೆಳೆಯಿರಿ ಪ್ರಚಾರದಿಂದ ಯಾವ ಲಾಭವೂ ಆಗಿಲ್ಲ. ಆಹಾರ ಬೆಳೆ ಕ್ಷೇತ್ರ ೩೦ ಲಕ್ಷ ಎಕರೆದಷ್ಟು ಬೆಳೆಯಿತು; ಆಹಾರದ ಕೊರತೆ ಮಾತ್ರ ತಪ್ಪಲಿಲ್ಲ. ಇಂಥ ಗಂಭೀರ ಪರಿಸ್ಥಿತಿಯನ್ನೆದುರಿಸಲು ಸರಕಾರದ ೪ ವರ್ಷಗಳ ಪ್ರಯತ್ನದಿಂದ ಅಲ್ಪಸ್ವಲ್ಪ ಸಹ ಲಾಭವಾಗದಿರುವದು ಖಂಡನಾರ್ಹವಿರುವದು. ಈಗ ಕಾಯಿಪಲ್ಲೆ, ಹಣ್ಣುಹಂಪಲ, ಗಡ್ಡೆಗೆಣಸು ಮತ್ತು ಹಿಂಡಿಗಳ ಹೊರ್ತು ಉಳಿದ ಅರೆಹೊಟ್ಟೆ ತುಂಬಿಕೊಳ್ಳುವದಕ್ಕೆ ಅನ್ಯಮಾರ್ಗವಿಲ್ಲ. ಆ ದಿಸೆಯಲ್ಲಿ ಸಹ ಸರಕಾರದ ಯಾವ ಪ್ರಯತ್ನವೂ ಕಂಡುಬರದಿರುವದು ಆಶ್ಚರ್ಯಕರವಾಗಿರುತ್ತದೆ.

### ನಾವಿಕರ 'ಬಂಡು'!

ಸುಭಾಸ ದಿನಾಚರಣೆಯ ಗಲಭೆಗಳಿಂದ ಆಗ ತಾನೇ ಚೇತರಿಸಿಕೊಂಡು ಶಾಂತವಾಗಿದ್ದ ಮುಂಬೈ ನಗರವನ್ನು ಹಿಂದೀ ನಾವಿಕರು ಕಳೆದ ವಾರ ಸುಂಯ್‌ಗುಡುವ ಗುಂಡುಗಳ ಮಳೆಯಿಂದ ನಡುಗಿಸಿ ಬಿಟ್ಟರು. ಇದು ಮೊದಲು ಸಂಪಿನಲ್ಲಿ ಪ್ರಾರಂಭವಾಗಿ ಕೊನೆಗೆ ಪ್ರತ್ಯಕ್ಷ ಕಾಳಗದಲ್ಲಿ ಮುಕ್ತಾಯವಾಯಿತು. ಸಾವಿರಾರು ಹಿಂದೀ ನಾವಿಕರು ಹಡಗಗಳನ್ನು ವಶಪಡಿಸಿಕೊಂಡು ಮತ್ತು ದಂಡೆಯಲ್ಲಿ ವ್ಯೂಹ ಕಟ್ಟಿಕೊಂಡು ಹೋರಾಡಿದರು; ಬ್ರಿಟಿಶ್ ಸೈನಿಕರ ಗುಂಡುಗಳಿಗೆ ಗುಂಡಿನಿಂದಲೇ ಉತ್ತರವಿತ್ತರು. ತೋಫು ಗರ್ಜನೆಯೂ ಪ್ರಾರಂಭವಾಗಿತ್ತು. ಮುಂಬೈ ನಗರವು ಬರ್ಲಿನ ಆಗುವ ಹೊತ್ತು ಬಂದಿತ್ತು. ಆದರೆ ಸರದಾರ ವಲ್ಲಭಭಾಯಿ ಪಟೇಲರ ಸಮಯೋಚಿತ ಸಲಹೆಯಂತೆ ಹಿಂದೀ ನಾವಿಕರು ಎರಡು ದಿನಗಳ ನಂತರ ಶರಣು ಹೋಗಿ ಶಸ್ತ್ರಗಳನ್ನು ಒಪ್ಪಿಸಿದರು. ಮಹಾ ಯುದ್ಧದ ಮಹಾ ಜ್ವಾಲೆಯಲ್ಲಿ ಇದು ಸಣ್ಣ ಕಿಡಿಯಾಗಿ ಕಾಣಿಸಿದರೂ ಇಡೀ ಜಗತ್ತನ್ನು ಪ್ರಕಾಶಿಸಿತ್ತು. ಬ್ರಿಟಿಶರಂತೂ ಬೆಚ್ಚಿ ಬಿದ್ದರು. ಇವೆಲ್ಲ ಏತಕ್ಕೆ? ಬ್ರಿಟಿಶ ಸರಕಾರದವರು ಸೈನ್ಯದಲ್ಲಿ ತೋರಿಸುತ್ತಿರುವ ವರ್ಣದ್ವೇಷವು ಇದಕ್ಕೆ ಮುಖ್ಯ ಕಾರಣವೆನ್ನಬಹುದು. ಹಿಂದೀ ಸೈನಿಕರು ಬ್ರಿಟಿಶರ ಮುಂದೆ ಕೀಳಾಗಿ ನಡೆಸಿಕೊಳ್ಳಲ್ಪಡುತ್ತಾರೆ. ಅವರಿಗೆ ಸಂಬಳ ಕಡಿಮೆ, ಗೌರವ ಕಡಿಮೆ, ಆಹಾರ ಕಡಿಮೆತರದ್ದು. ಈ ಭೇದಭಾವದಿಂದ ಅವಮಾನಿತರಾದ ನಾವಿಕರು ಮೊದಲು ಸಂಪು ಹೂಡಿದರು. ಕೊನೆಗೆ ಅದು ಮೇಲಿನಂತೆ ಪರಿಣಮಿಸಿತು. ಇದು ಎರಡು ದಿನದ ಘಟನೆಯಾದರೂ ಇತಿಹಾಸದಲ್ಲಿ ಚಿರಸ್ಮರಣೀಯವಾಗಿ ಉಳಿಯದಿರದು. ಹಿಂದೀ ಸೈನಿಕರು ತಮಗೂ ಒಂದು ಆತ್ಮವಿದೆ, ಗೌರವವಿದೆ, ಸ್ವಾತಂತ್ರ್ಯಾಭಿಲಾಷೆ ಇದೆ ಎಂಬುದನ್ನು ತೋರಿಸಿಕೊಟ್ಟರು. ಸೇನಾಪತಿ ಅಚಿನಲೆಕ್ಕರು ಇದಕ್ಕೆ ಬಂಡು ಎಂದು ಕರೆದುದನ್ನು ನಾವು ಒಪ್ಪುವದಿಲ್ಲ. ಸೈನಿಕರು ಅನ್ನವನ್ನು ನಿರಾಕರಿಸಿದರೂ ಸಹ ಬಂಡು ಎಂದು ಇವರು ವ್ಯಾಖ್ಯೆ ಮಾಡುತ್ತಾರೆ. ಆದರೆ ಇತ್ತೀಚೆಗೆ ಅನೇಕ ಬ್ರಿಟಿಶ ವೈಮಾನಿಕರು ಇದೇ ದೇಶದಲ್ಲಿ ಸಂಪು ಹೂಡಿದಾಗ ಅವರನ್ನು ಬಂಡುಗಾರರೆಂದು ಯಾರೂ ಕರೆಯಲಿಲ್ಲ. ಅವರ ಅಡಚಣೆಗಳ ಬಗ್ಗೆ ವಿಶೇಷ ವಿಚಾರಣೆಯಾಗಿ ಅವು ಮನ್ನಿಸಲ್ಪಟ್ಟವು. ಹಿಂದೀಯರ ವಿಷಯದಲ್ಲಿ ಮಾತ್ರ ಬೇರೆ ಕಾಯಿದೆ! ಈ ಸಂಪಿನಲ್ಲಿ ರಾಜಕೀಯದ ಪ್ರವೇಶವಾಗಿತ್ತೆಂದು ಸೇನಾಪತಿಗಳು ಸೂಚಿಸಿದ್ದಾರೆ. ನಾವಿಕರು ಮಾತೃಭೂಮಿಯ ಮೇಲೆ ತೋರಿದ ಪ್ರೇಮಕ್ಕೆ ಅವರು ರಾಜಕೀಯವೆಂದರೆ ಅದರಲ್ಲಿ ಅಪರಾಧವೇನೂ ಇಲ್ಲವೆಂದು ನಾವು ಹೇಳಬಯಸುವೆವು. ಹಿಂದುಸ್ತಾನದಲ್ಲಿ ರಾಜನಿಷ್ಠೆ-ರಾಷ್ಟ್ರನಿಷ್ಠೆಯ ಪ್ರಶ್ನೆ ಬಂದಿದೆಯೆಂದು ಹಾಡ್ಸನ್ ಎಂಬ ಬ್ರಿಟಿಶ ಅಧಿಕಾರಿ ಹೇಳಿರುತ್ತಾನೆ. ಅದುದರಿಂದ ಆಝಾದ ಸೈನಿಕರ ವಿಚಾರಣೆ ಹೂಡಿ ಪ್ರಮಾದ ಮಾಡಿದಂತೆ ಸೇನಾಪತಿಗಳು ಈ ಪ್ರಕರಣದಲ್ಲಿ ಮಾಡುವದಿಲ್ಲವೆಂದೂ ಸಾರ್ವಜನಿಕ ಮುಖಂಡರ ಅಭಿಪ್ರಾಯಕ್ಕೆ ತಲೆಬಾಗಿ ನಾವಿಕರ ಬೇಡಿಕೆಗಳನ್ನು ಪೂರೈಸುವರೆಂದೂ ನಾವು ಆಶಿಸುತ್ತೇವೆ.

### ಹಿಂದೀ ಸಮಸ್ಯೆ

ಮುಂಬೈ ಘಟನೆಯ ಪರಿಣಾಮವು ಹಿಂದೀ ಸಮಸ್ಯೆಯು ಮೇಲಾಗಬಹುದೆಂದೂ ಬ್ರಿಟಿಶ್ ಮಂತ್ರಿಗಳ ರಾಯಭಾರ ವಿಫಲವಾಗಬಹುದೆಂದೂ ಹಾರ ಸುದ್ದಿಗಳು ಕೇಳಬರುತ್ತವೆ. ಹಿಂದೀ ಸಮಸ್ಯೆ ಅತ್ಯಂತ ಸೂಕ್ಷ್ಮವಾಗಿದ್ದು ಅದರ ಸಂಬಂಧ ಹೊರಡುವ ಎಲ್ಲ ತರ್ಕವಿತರ್ಕಗಳು ನಿಜವೆಂದು ಕ್ಷಣ ಹೊತ್ತು ಎನಿಸದಿರಲಾರದು. ಈ ತರ್ಕವಿತರ್ಕಗಳು ಒತ್ತಟ್ಟಿಗಿರಲಿ, ಈ ಸಮಸ್ಯೆಯನ್ನು ಬಿಡಿಸುವ ಹೊಣೆ ಇದ್ದ ವ್ಯಕ್ತಿಗಳು ಏನು ಹೇಳುವರೆಂಬದನ್ನು ನೋಡೋಣ. ಭಾರತಮಂತ್ರಿ ಲಾರ್ಡ ಪೆಥಿಕ್ ಲಾರೆನ್ಸರು ಒಂದು ಭೋಜನ ಸಮಾರಂಭದಲ್ಲಿ ಮಾತಾಡುತ್ತ, "ನಾವು ನಮ್ಮ ಆಶ್ವಾಸನಗಳನ್ನು ಕೃತಿಗಿಳಿಸಲು ಸಿದ್ಧರಾಗಿದ್ದೇವೆ. ನಮ್ಮ ಕಾರ್ಯ ಯಶಸ್ವಿಯಾಗುವದೆಂದು ನಮಗೆ ವಿಶ್ವಾಸವಿದೆ. ಬಿಡದ ಸಮಸ್ಯೆಯನ್ನು ಬಿಡಿಸುವಲ್ಲಿಯೇ ಜಾಣ್ಮೆ ಇದೆ" ಎಂದು ಮುಂತಾಗಿ ಹೇಳಿದರು. ಬ್ರಿಟಿಶ್ ರಾಯಭಾರದ ಬತ್ತಳಿಕೆಯಲ್ಲಿದ್ದುದನ್ನು ಬಲ್ಲವರಾದ ಲಾರ್ಡ ಪೆಥಿಕರು ಹೀಗೆ ಹೇಳುವಾಗ ಇದಕ್ಕೆ ವಿರುದ್ಧವಾದ ತರ್ಕಗಳನ್ನು ನಂಬುವದು ಹೇಗೆ? ಆದರೂ ಮನಸ್ಸು ಹೊಯ್ದಾಡುವಂಥ ಸಂಗತಿಗಳು ನಡದೇ ಇವೆ. ಬ್ರಿಟಿಶ್ ರಾಯಭಾರದ ಸದಸ್ಯರಲ್ಲೊಬ್ಬರಾದ ನೌಕಾಮಂತ್ರಿ ಎ. ವ್ಹಿ. ಅಲೆಕ್ಝಾಂಡರರು ಬ್ರಿಟಿಶ್ ಸಾಮ್ರಾಜ್ಯವನ್ನು ವಿಸರ್ಜಿಸಲಾರೆವೆಂದು ಚರ್ಚಿಲ್ಲರಿಗಿಂತಲೂ ದರ್ಪದಿಂದ ಹೇಳಿರುವರೆಂದು ವರದಿಯಾಗಿದೆ. ಅಲ್ಲದೆ ವಿದೇಶಮಂತ್ರಿ ಅರ್ನೆಸ್ಟ ಬೇವಿನ್ನರು ಕಳೆದವಾರ ಪರರಾಷ್ಟ್ರ ನೀತಿಯನ್ನು ವಿವರಿಸುವಾಗ ಸಾಮ್ರಾಜ್ಯವನ್ನು ವಿಸರ್ಜಿಸಿದರೆ, ಇಡೀ ಜಗತ್ತಿಗೇ ಪ್ರಳಯಕಾಲ ಬರುವದೆಂದು ಬೆದರುಗುಂಡು ಹಾರಿಸಿದ್ದಾರೆ. ಇಂಗ್ಲಂಡು ಇಡೀ ಜಗತ್ತೆಂದು ತಿಳಿದಿದ್ದರೆ ಅವರ ಅಭಿಪ್ರಾಯಕ್ಕೆ ನಮ್ಮ ಆಕ್ಷೇಪವಿಲ್ಲ. ಇರಲಿ, ಇದು ಸದ್ಯಕ್ಕೆ ಅಪ್ರಸ್ತುತ. ಆದರೆ ಬ್ರಿಟಿಶ್‌ಮಂತ್ರಿ ಮಂಡಲದಲ್ಲಿಯೇ ಹಿಂದೀ ಸಮಸ್ಯೆ ಬಗ್ಗೆ ತಾಳಮೇಳವಿಲ್ಲವೆಂದು ಇದರಿಂದ ವ್ಯಕ್ತವಾಗುವದು. ಕಾರಣ ರಾಯಭಾರವು ಸಮಸ್ಯೆ ಬಿಡಿಸುವ ದೃಢ ನಿರ್ಧಾರದಿಂದ ಬರುವದೆಂದು ನಂಬದಂತಾಗಿದೆ. ಹಿಂದೀ ಸ್ವಾತಂತ್ರ್ಯವನ್ನು ಇಂತಿಷ್ಟು ಅವಧಿಯೊಳಗಾಗಿ ಕೊಟ್ಟೇ ತೀರುವರೆಂದು ಘೋಷಿಸಿ ಇಂಥ ಸಂಶಯದ ಪ್ರಸಂಗಗಳನ್ನು ತಪ್ಪಿಸಬೇಕೆಂದು ನಾವು ಈ ಮೊದಲು ಸೂಚಿಸಿದ್ದೆವು. ಈಗ ಅದು ಅನ್ವಯಿಸುತ್ತದೆ. ಆದರೆ ಸವ್ಯಹಸ್ತರ ಮಾತುಗಳನ್ನು ಸವ್ಯಹಸ್ತರು ನಂಬಬೇಕಾಗುತ್ತದೆ. ಅಲ್ಲದೆ ಇದು ಬ್ರಿಟಿಶ್ ಮಂತ್ರಿಮಂಡಲದ ಹೊಸ ಸಾಹಸವಿರುವದರಿಂದ ಒಂದು ತಿಂಗಳಮಟ್ಟಿಗೆ ನಮ್ಮ ಆತುರತೆಯನ್ನು ಹತ್ತಿಕ್ಕಿಕೊಂಡು ನಂಬಲಡ್ಡಿಯಿಲ್ಲ. ಮಹಾತ್ಮಾ ಗಾಂಧಿಯವರು ಸಹ ಶ್ರೀಮತಿ ಅರುಣಾರಿಗೆ ಕೊಟ್ಟ ಉತ್ತರದಲ್ಲಿ ಇದನ್ನೇ ಹೇಳಿದ್ದಾರೆ. "ಬ್ರಿಟಿಶ್ ಉದ್ದೇಶದಲ್ಲಿ ನಂಬಿಗೆ ಇಡದೆ ಮೊದಲೇ ಜಗಳ ಹೂಡುವ ಪ್ರಯತ್ನ ಮಾಡುವದು ಅದೂರದರ್ಶಿತ್ವವೆನಿಸುತ್ತದೆ. ಹಿಂದುಸ್ತಾನದಂಥ ಮಹಾರಾಷ್ಟ್ರವನ್ನು ಮೋಸಗೊಳಿಸಲು ಅವರು ಇಲ್ಲಿಗೆ ಬರಲಿರುವರೇ? ಹಾಗೆ ಭಾವಿಸುವದು ಸರ್ವಥಾ ತಪ್ಪು" ಎಂದು ಗಾಂಧೀಜಿಯವರ ಅಭಿಪ್ರಾಯವಿದೆ. ಬ್ರಿಟಿಶ್ ಮಂತ್ರಿಗಳು ಈ ಸಹಾನುಭೂತಿಯ ವಿಶ್ವಾಸಕ್ಕೆ ಪಾತ್ರರಾಗುವರೋ ನೋಡಬೇಕಾಗಿದೆ.

# ಮುಂಬಯಿ ನಾವಿಕ ಸೈನಿಕರ ಸಂಪು

## ಗುಂಡಿಗೆ ಗುಂಡಿನಿಂದ ಉತ್ತರ

### ಪಟ್ಟಣದಲ್ಲಿ ಪುನಃ ಗಲಭೆ; ಗೋಳೀಬಾರಿನಲ್ಲಿ ೨೧೦ ಜನರ ಮರಣ; ೧೦೦೦ ಜನರಿಗೆ ಗಾಯ

ಮುಂಬಯಿಯಲ್ಲಿಯ ತಲವಾರ ನಾವಿಕ ಶಿಕ್ಷಣ ಕೇಂದ್ರದಲ್ಲಿಯ ನಾವಿಕ ಸೈನಿಕರು ತಮ್ಮ ಕೆಲವು ಬೇಡಿಕೆಗಳನ್ನು ಮುಂದಿಟ್ಟು ೧೮ ನೇ ತಾರೀಖಿಗೆ ಸಂಪು ಹೂಡಿದರು. ಊರಲ್ಲಿಯ ಇತರ ನಾವಿಕ ಸೈನಿಕರೂ ಅವರನ್ನು ಕೂಡಿದರು. ಹೀಗೆಯೆ ೫-೬ ದಿವಸ ಸಂಪು ನಡೆಯಿತು. ಮುಂದೆ ಮಂಗಳವಾರ ಹಾಗು ಬುಧವಾರ ದಿವಸ ಅವರು ಊರಲ್ಲಿ ಮೆರವಣಿಗೆ ಹೊರಡಿಸಿದರು. ಆಗ ಅಲ್ಲಲ್ಲಿ ಅತ್ಯಾಚಾರ ಘಟಿಸಿ ಅಂಗಡಿ ಒಡೆಯುವದು, ಮಿಲಿಟರಿ ವಾಹನಗಳನ್ನು ಸುಡುವದು ಸುರುವಾಯಿತು ಬುಧವಾರ ಮಧ್ಯಾನ್ಹ ನಾವಿಕ ಅಧಿಕಾರಿಗಳು ಮಧ್ಯಾನ್ಹ ೪ ಗಂಟೆಯೊಳಗಾಗಿ ಬರಾಕಿನಲ್ಲಿ ಹೋಗಲು ಅಪ್ಪಣೆ ಮಾಡಿದರು. ಅದರಂತೆ ಬಹುತರ ಎಲ್ಲರೂ ಒಳಗೆ ಹೋದರು. ಕೆಲವರು ಓಡಿ ಹೋಗಲು ಪ್ರಯತ್ನಿಸಲಾಗಿ ಅವರನ್ನು ಬೆನ್ನಟ್ಟಿ ಹಿಡಿದು ಜುಲುಮೆಯಿಂದ ಒಳಗೆ ಹಾಕಿದರು. ಆ ಮೇಲೆ ಅಲ್ಲಿ ಮಿಲಿಟರಿ ಕಾವಲಿಟ್ಟರು ಒಳಗಿನವರು ಹೊರಗೆ ಬರಲು ಅಪ್ಪಣೆಯಿರಲಿಲ್ಲ.

### ಗುಂಡಿಗೆ ಗುಂಡಿನಿಂದ ಉತ್ತರ

ನಾವಿಕ ಸೈನಿಕರು ಹೊರಗೆ ಬರಲು ಯತ್ನಿಸುತ್ತಿರಲು ಅವರ ಮೇಲೆ ಗುಂಡು ಹಾರಿಸಲಾಯಿತು. ನಾವಿಕ ಸೈನಿಕರು ಬಂದರದಲ್ಲಿಯ ಮದ್ದು ಗುಂಡಿನ ವಖಾರವನ್ನೂ ೧೨-೧೩ ಹಡಗಗಳನ್ನೂ ತಮ್ಮ ವಶಕ್ಕೆ ತೆಗೆದುಕೊಂಡು ಒಳಗಿನಿಂದಲೆ ಗುಂಡಿನಿಂದ ಉತ್ತರ ಕೊಟ್ಟರು. ಹಡಗಗಳ ಮೇಲೆ ಸಣ್ಣ ತೋಫುಗಳನ್ನು ಏರಿಸಲಾಯಿತು. ಮಿಲಿಟರಿಯವರು ವಿಮಾನದಿಂದ ದಾಳಿ ಮಾಡಿದರು. ಕ್ಯಾಸಲ ಬರಾಕ ಬಳಿಯಲ್ಲಿ ಪ್ರತ್ಯಕ್ಷ ಯುದ್ಧವೇ ನಡೆಯಿತು "ಮುಂದೆ ಗುರುವಾರ ಸಾಯಂಕಾಲ ಪರಿಸ್ಥಿತಿ ಸುಧಾರಿಸಿ ಒಡಂಬಡಿಕೆಯ ಮಾತು ಸುರುವಾದವು.

ಹಿಂದುಸ್ತಾನದ ನಾವಿಕ ಅಧಿಕಾರಿಗಳಾದ ಗಾಡಫ್ರೆಯವರು ಆಕಾಶವಾಣಿಯಲ್ಲಿ ಭಾಷಣ ಮಾಡುತ್ತ "ಯಾವತ್ತೂ ಹಿಂದಿ ಹಡಗಪಡೆ ನಾಶವಾದರೂ ಚಿಂತೆ ಮಾಡುವದಿಲ್ಲ. ಸರ್ವ ಶಕ್ತಿ ಖರ್ಚು ಮಾಡಿ ಬಂಡನ್ನು ಸದೆಬಡೆಯುವೆವು" ಎಂದು ನಾವಿಕ ಸೈನಿಕರಿಗೆ ಎಚ್ಚರಿಕೆ ಕೊಟ್ಟರು.

ನಾವಿಕ ಸೈನಿಕರಿಗೆ ಸಹಾನುಭೂತಿ ತೋರಿಸಲು ನೇವ್ಹಲ ಅಕೌಂಟ್ಸ ಕಚೇರಿಯಲ್ಲಿಯ ಕಾರಕೂನರೂ ಹಿಂದೀ ವಿಮಾನ ದಲದ ಮರೀನ ಡ್ರಾಯಿವ್ಹ ಶಿಬಿರದ ಸೈನಿಕರೂ ಸಂಪು ಮಾಡಿದರು. ಇದಲ್ಲದೆ ಗುರುವಾರ ಸಾಯಂಕಾಲ ನಾಗರಿಕರು ಸಹಾನುಭೂತಿಪರವಾಗಿ ಮೆರವಣಿಗೆ ತೆಗೆದರು. ಆಗ ದಂಗೆ ಸುರುವಾಗಿ ಅದು ದಿನ ದಿನಕ್ಕೆ ವಿಕೋಪಕ್ಕೆ ಹೋಯಿತು. ಮೆಟ್ರೊ ಸಿನೇಮಾ ಗೃಹದ ಕಾಜುಗಳನ್ನು ಒಡೆಯಲಾಯಿತು. ಟ್ರಾಮು ಹಾಗು ಬಸ್ಸಗಳನ್ನು ತಡೆದು ಬೆಂಕಿ ಹಚ್ಚಲಾಯಿತು. ರಾಮವಾಡಿ, ಗಿರಗಾವ, ಬನಾಮ ಹಾಲಲೇನ ಈ ಸ್ಥಳಗಳಲ್ಲಿಯ ಅಂಚೆ ಕಚೇರಿಗಳಲ್ಲಿಯ ಕಾಗದಗಳನ್ನು ರಸ್ತೆಗೆ ತಂದು ಸುಡಲಾಯಿತು. ಜವ್ಹೇರಿ ಬಜಾರದಲ್ಲಿಯ ಅಂಗಡಿ ಲೂಟಿ ಮಾಡಿ ಪ್ರಿನ್ಸೆಸ ಬೀದಿಯಲ್ಲಿಯ ಪೆಟ್ರೋಲ ಪಂಪಿಗೆ ಬೆಂಕಿ ಹಚ್ಚಲಾಯಿತು. ಪೋಲೀಸರು ಮೆಟ್ರೋ ಸಿನೇಮಾ ಹಾಗು ರಾಮವಾಡಿಯಲ್ಲಿ ಗೋಳೀಬಾರ ಮಾಡಿದರು. ಜಾಪು ಖೋಟಿ ಬೀದಿಯಲ್ಲಿ ಇಬ್ಬರು ವಿದೇಶಿ ಸೈನಿಕರಿಗೆ ಬಡತ ಬಿದ್ದವು.

### ವಲ್ಲಭಭಾಯಿಯವರ ಸಲಹೆ

ಗುರುವಾರ ದಿವಸ ಪೋಲೀಸರು ಮಾಡಿದ ಗೋಳೀಬಾರಿನ ನಿಷೇಧಾರ್ಥ ಕಮ್ಯುನಿಸ್ಟರು ಶುಕ್ರವಾರ ಹರತಾಳ ಪಾಲಿಸಲು ತಿಳಿಸಿದ್ದರು. ಆದರೆ ಕಾಂಗ್ರೆಸ ಧುರೀಣರಾದ ಸರದಾರ ವಲ್ಲಭಭಾಯಿ ಪಟೇಲ ಹಾಗು ಎಸ್. ಕೆ. ಪಾಟೀಲ ಅವರು ಜನರಿಗೆ ಶಾಂತವಾಗಿರಲು ಹಾಗು ಹರತಾಳ ಪಾಲಿಸದಿರಲು ವಿನಂತಿಸಿದರು. ಇದಲ್ಲದೆ ಸಂಪುಗಾರರು ಅನಿರ್ಬಂಧ ಶರಣು ಹೋಗಬೇಕು. ಯಾರಿಗೂ ಸಂಪಿನ ನಿಮಿತ್ತ ಧಕ್ಕೆ ತಟ್ಟದಂತೆ ನೋಡಿಕೊಳ್ಳುವೆವು ಎಂದು ವಲ್ಲಭಭಾಯಿಯವರು ಅವರಿಗೆ ಸಲಹೆ ಕೊಟ್ಟರು.

### ಪುನಃ ಗಲಭೆ

ಆದರೆ ಶುಕ್ರವಾರ ಮುಂಜಾನೆ ಫಿರೋಜ ಶಹಾ ಮೇಥಾ ರಸ್ತೆಯಲ್ಲಿ ಒಂದು ಮಿಲಿಟರಿ ವಾಹನವು ಭರದಿಂದ ಬಂದು ೩—೪ ಹಾದಿ ಹೋಕರ ಮೇಲೆ ಹಾಯ್ದು ಹೋದ್ದರಿಂದ ಪುನಃ ಗಲಭೆ ಸುರುವಾಗಿ ಮಿಲಿಟರಿ ಮೋಟರುಗಳನ್ನು ಸುಡುವದು, ಯುರೋಪಿಯನ್ ಕಂಪನಿಗಳ ಅಂಗಡಿಗಳ ಕಾಜ ಮೊದಲಾದದ್ದು ಒಡೆಯುವದು, ಸರಕಾರಿ ಧಾನ್ಯದ ಅಂಗಡಿಗಳನ್ನು ಲೂಟಿ ಮಾಡುವದು, ಪೋಸ್ಟ ಆಫೀಸುಗಳಲ್ಲಿಯ ಕಾಗದ ಸುಡುವದು, ನಡೆಯಿತು. ಇದೇ ಕಾಲಕ್ಕೆ ಜನರ ದೊಡ್ಡದೊಂದು ಮೆರವಣಿಗೆ ಹೊರಟಿತ್ತು ಅದರಲ್ಲಿ ಕಾಂಗ್ರೆಸ ಹಾಗು ಲೀಗದವರು ಭಾಗವಹಿಸಿದರು ಆಗ ಒಂದು ಮಿಲಿಟರಿ ವಾಹನ ಬಂದು ಇಬ್ಬರ ಮೇಲೆ ಹಾಯಿತು. ಜನರು ರೊಚ್ಚಿಗೆದ್ದು ಅದನ್ನು ಸುಟ್ಟರು. ಪೋಲೀಸರು ಬಂದು ದಂಗೆಗಾರರನ್ನು ಚದುರಿಸಲು ಗೋಳೀಬಾರ ಮಾಡಿದರು. ದಂಗೆಯು ಉತ್ತರ ದಿಕ್ಕಿಗೂ ಹಬ್ಬಿತು. ಆಗ ಪೋಲೀಸರ ಸಹಾಯಕ್ಕೆ ಸೈನಿಕರು ಆಗಮಿಸಿದರು. ಕ್ರಾಫರ್ಡ ಮಾರ್ಕೆಟ ಬೆಂಡಿ ಬಜಾರಗಳಲ್ಲಿಯ ಅಂಗಡಿಗಳು ಲೂಟಿ ಮಾಡಲ್ಪಟ್ಟು ಲಾಲಬಾಗದಲ್ಲಿಯ ಟ್ರಾಮು ಶೆಡ್ಡಿಗೆ ಬೆಂಕಿ ಹಚ್ಚಲಾಯಿತು.

ಇಷ್ಟರಲ್ಲಿ ಸಂಪು ವಿದ್ಯಾರ್ಥಿಗಳು ಹಾಗು ಕೂಲಿಕಾರರಲ್ಲೂ ಹಬ್ಬಿತು. ವಿದ್ಯಾರ್ಥಿಗಳು ಶಾಲೆ ಕಾಲೇಜಗಳಿಗೆ ಶರಣ ಹೊಡೆದರು. ಜಿ. ಆಯ. ಪಿ ರೇಲ್ವೆ ವರ್ಕಶಾಪ ಕೆಲಸಗಾರರು ಧರಣಿ ಸಂಪು ಹೂಡಿದರು. ಎಲ್ಲ ಕಡೆಗೆ ದಂಗೆ ಸುರುವಾಗಿ ಅಬ್ದುಲ್ ರಹಿಮಾನ ಬೀದಿ, ಸ್ಯಾಂಡರ್ಸ್ಟ ಬೀದಿ ಹಾಗು ಡಂಕನ ರಸ್ತೆಯಲ್ಲಿ ಇಂಪೀರಿಯಲ್ ಬ್ಯಾಂಕಿನ ಶಾಖೆಗಳನ್ನು ಒಡೆದು ಒಳಗಿನ ಸಾಮಾನುಗಳನ್ನು ಹೊರತೆಗೆದು ಸುಡಲಾಯಿತು. ಸಾಂಖಳಿ ಬೀದಿಯಲ್ಲಿಯ ಸಾಲ್ವೇಶನ್ ಸೈನ್ಯ ಕಟ್ಟಡದಲ್ಲಿಯ ಸೀದಾ ಕಚೇರಿಗೆ ಬೆಂಕಿ ಹಚ್ಚಲಾಯಿತು ಗಿರಗಾವ ಪ್ರಾರ್ಥನಾ ಸಮಾಜ ಬಳಿಯಲ್ಲಿಯ ಪೋಲೀಸ ಚೌಕಿ ಭಸ್ಮಗೊಳಿಸಲಾಯಿತು.

### ಹೆಚ್ಚಿನ ಸೈನಿಕರನ್ನು ಕರಿಸಿದರು

ಪೋಲೀಸ ಕಮೀಶನರರು ಶುಕ್ರವಾರ ರಾತ್ರಿ ೯ ರಿಂದ ಮುಂಜಾನೆ ೬ ರ ವರೆಗೆ ಕರ್ಫ್ಯೂ ಹುಕುಮು ಜಾರಿಮಾಡಿದರು. ಈ ಶುಕ್ರವಾರ ಒಂದೇ ದಿನದಲ್ಲಿ ೧೯ ಸರಕಾರಿ ಧಾನ್ಯದ ಅಂಗಡಿಗಳ ಲೂಟಿ ಆಯಿತು. ಇಂಪೀರಿಯಲ್ ಬ್ಯಾಂಕಿನ ಮೂರು ಹಾಗು ಲಾಯಿಡ್ಸ ಬ್ಯಾಂಕಿನ ಒಂದು ಹೀಗೆ ನಾಲ್ಕು ಶಾಖೆಗಳನ್ನು ಒಡೆಯಲಾಯಿತು. ಅಲ್ಲಲ್ಲಿ ಪೋಸ್ಟ ಆಫೀಸುಗಳಿಗೆ ಬೆಂಕಿ ಹಚ್ಚಿದರು. ಜವಳಿ, ಸರಾಫಿ ಹಾಗೆ ಸಿಂದಿ ಅಂಗಡಿಗಳನ್ನು ಲೂಟಿ ಮಾಡಲಾಯಿತು. ಪೋಲೀಸರ ಗೋಳೀಬಾರಿನಲ್ಲಿ ೫೯ ಜನರು ಮರಣ ಹೊಂದಿದರು. ಅವರಲ್ಲಿ ಒಬ್ಬ ಸ್ತ್ರೀ ಹಾಗು ಇಬ್ಬರು ಪೋಲೀಸರು ಇದ್ದರು. ಸುಮಾರು ೬೫೦ ಜನರು ಗಾಯಗೊಂಡರು ಅವರಲ್ಲಿ ೩೭ ಪೋಲೀಸ ಅಧಿಕಾರಿಗಳು ೯೦ ಕಾನಸ್ಟೇಬಲರಿದ್ದರು.

ಶನಿವಾರ ದಿವಸ ಪೋಲೀಸ ಸಹಾಯಕ್ಕೆ ಹೆಚ್ಚಿನ ಸೈನ್ಯ ಬಂತು. ಗಸ್ತಿಕಾರ್ಯ ಅವರಿಗೆ ಒಪ್ಪಿಸಲಾದ್ದರಿಂದ ರಸ್ತೆಗಳಲ್ಲಿ ಚಿಲಖತ್ತಿನ ಗಾಡಿಗಳ ಓಡಾಟ ಸುರುವಾಯಿತು. ರಸ್ತೆಯಲ್ಲಿ ಅಡ್ಡಿ ಮಾಡುವವರಿಗೆ ತಕ್ಷಣ ಗುಂಡು ಹಾಕಲು ಅವರಿಗೆ ಅಧಿಕಾರ ಕೊಡಲಾಗಿತ್ತು.

ಆದರೆ ಶನಿವಾರ ದಿನವೇ ಹೆಚ್ಚು ದಂಗೆ ಸಂಭವಿಸಿತು. ದಾದರ ಹಾಗು ಮಾಹೀಮದಲ್ಲಿಯ ಬಿ. ಬಿ. ಸಿ. ಆಯ. ರೇಲ್ವೆ ಸ್ಟೇಶನಗಳಿಗೆ ಬೆಂಕಿ ಹಚ್ಚುವ ಅಯಶಸ್ವಿ ಪ್ರಯತ್ನ ನಡೆದಿದ್ದಲ್ಲದೆ ಶಿವಾಜಿ ಪಾರ್ಕ ಬಳಿಯಲ್ಲಿಯ ಪೆಟ್ರೋಲ ಪಂಪು ಸುಟ್ಟು ಸಮೀಪದ ಕೋಹಿನೂರ ಗಿರಣಿಗೆ (ನಂ ೩) ಬೆಂಕಿ ಹಚ್ಚಲಾಯಿತು.

### ಫೌಜದಾರರನ್ನು ಜೀವಂತ ಸುಡುವ ಪ್ರಯತ್ನ

ಮಾಹೀಮ ಪೋಲೀಸ ಸ್ಟೇಶನದ ಇನಸ್ಪೆಕ್ಟರ ಥಾಮಸ ಅವರನ್ನು ಜನರು ಗಿಡಕ್ಕೆ ಕಟ್ಟಿ ಕಲ್ಲೆಣ್ಣೆ ಸುರುವಿ ಜೀವಂತ ಸುಡುವ ಪ್ರಯತ್ನ ನಡಿಸಿದ್ದರು ಆದರೆ ಅಷ್ಟರಲ್ಲಿ ಮಿಲಿಟರಿ ಬಂದಿದ್ದರಿಂದ ಅವರು ಜೀವಂತ ಉಳಿದರು.

ಮಿಲಿಟರಿಯವರ ಗೋಳೀಬಾರಿನಲ್ಲಿ ಸೌ ಕಮಲದೊಂದೆ ಎಂಬವರು ಮರಣ ಹೊಂದಿದ್ದಲ್ಲದೆ ಕು. ಕುಸುಮ ರಣದಿವೆಯವರಿಗೂ ಕಾಲಿಗೆ ಗುಂಡಿನ ಗಾಯವಾಗಿದೆ.

ಶನಿವಾರ ಒಂದೇ ದಿವಸ ೪೦೦ ಜನರು ಗಾಯಗೊಂಡು ೧೭೦ ಜನರು ಸತ್ತರು. ಅಂದೇ ನಾವಿಕರು ಮುಖಂಡರ ಸಲಹೆ ಪ್ರಕಾರ ಶರಣಾಗತರಾಗಿ ಕೆಲಸಕ್ಕೆ ಹಾಜರಾದರು.

ದಂಗೆಯಲ್ಲಿ ಒಟ್ಟು ೨೧೦ ಜನರು ಸತ್ತು ೧೦೧೭ ಜನರು ಗಾಯಗೊಂಡಿರುವರೆಂದು ಸರಕಾರ ವರದಿಯಿಂದ ತಿಳಿಯುವದು ಪರಿಸ್ಥಿತಿ ಎದುರಿಸಲು ಬ್ರಿಟಿಶ ಹಡಗಪಡೆಯ ಎರಡು ವಿನಾಶಿಕೆಗಳೂ ಬಂದಿದ್ದವು.

### ನಾವಿಕರ ಬೇಡಿಕೆಗಳು

ಸಂಪಿಗೆ ಕಾರಣವಾದ ನಾವಿಕರ ಬೇಡಿಕೆಗಳು ಈ ರೀತಿ ಇರುವವು ೧ ಸಂಪುಗಾರರ ಧುರೀಣರಿಗೆ ಅಥವಾ ಸಂಪುಗಾರರಿಗೆ ಶಿಕ್ಷೆ ಮಾಡಬಾರದು ೨ ಉತ್ತಮ ಹಿಂದಿ ಪದ್ಧತಿಯ ಆಹಾರ ಕೊಡಬೇಕು ೩ ಪಗಾರ ಹಾಗು ಭತ್ತೆ ವಿದೇಶಿ ಸೈನಿಕರಷ್ಟೇ ಕೊಡಬೇಕು ೪ ನೌಕರಿ ಬಿಟ್ಟು ಹೋಗುವಾಗ ಉಡಿಗೆ ಮೊದಲಾದದ್ದು ತಿರುಗಿ ತಕ್ಕೊಳ್ಳಬಾರದು ೫ ಯುದ್ಧದ ನಿಮಿತ್ತ ಪಗಾರ ಹಾಗು ಬಕ್ಷೀಸಗಳ ಸವಲತ್ತು ಬೇಗನೆ ಕೊಡಬೇಕು ೬ ವಶೀಲಿಯಿಂದ ಬಡತಿ ಕೊಡಬಾರದು ೭ ಸೈನಿಕರೊಡನೆ ಅಪಮಾನಾಸ್ಪದ ರೀತಿಯಲ್ಲಿ ನಡೆದುಕೊಂಡ ಅಧಿಕಾರಿಯನ್ನು ವರ್ಗಾಯಿಸಬೇಕು ಮತ್ತು ಈ ಸಂಬಂಧದಲ್ಲಿ ಸೆರೆಹಿಡಿದ ಆರ್ ಕೆ ಸಿಂಗ ಅವರನ್ನು ಬಿಡಬೇಕು. ೮ ಆಝಾದ ಹಿಂದೀ ಸೈನಿಕರ ಮೇಲಿನ ಖಟ್ಲೆ ಹಿಂತೆಗೆದುಕೊಳ್ಳಬೇಕು. ೯ ಬೇರೆ ಬೇರೆ ಕಡೆಗೆ ನಡೆದ ಗೋಳೀಬಾರಗಳ ವಿಚಾರಣೆ ನಡಿಸಬೇಕು. ಹಾಗೂ ಇಂಡೋನೇಶಿಯಾ ಮತ್ತು ಮಧ್ಯಪೂರ್ವದಲ್ಲಿಯ ಹಿಂದಿ ಸೈನ್ಯ ತಿರುಗಿ ಕರೆಸಿಕೊಳ್ಳಬೇಕು ನಾವಿಕರ, ಈ ಸಂಪಿಗೆ ನಾವಿಕ ಅಧಿಕಾರಿಗಳಾದ ಗಾಡಫ್ರೆ ಅವರು ಉನ್ಮತ್ತತನದ ಉತ್ತರ ಕೊಟ್ಟದ್ದರಿಂದೇ ಸಂಪುಗಾರರು ತೋಫುಗಳನ್ನು ಆಶ್ರಯಿಸಬೇಕಾಯಿತು ಮತ್ತು ಕೂಡಲೆ ಅವರು ಮುಂಬಯಿಯ ೨೦ ಯುದ್ಧ ಹಡಗಗಳ ಮೇಲೆ ತೋಫು ಏರಿಸಿದರು. ಕರಾಚಿಯಲ್ಲಂತೂ ಎರಡೂ ಪಕ್ಷದವರಲ್ಲಿ ತೋಫುಗಳ ದ್ವಂದ್ವ ನಡೆದು ಅನೇಕ ಸೈನಿಕರು ರಣರಂಗಕ್ಕೆ ಆಹುತಿಯಾದರು. ಇದಲ್ಲದೆ ಮುಂಬಯಿಯಲ್ಲಿ ಮತ್ತೊಬ್ಬ ಅಧಿಕಾರಿಗಳಾದ ಕಿಂಗ ಅವರು ನಾವಿಕರಿಗೆ "ಕೂಲಿ ಮಕ್ಕಳು" "ನಾಯಿಯ ಮಕ್ಕಳು" ಎಂದು ಹೇಳುವಾಗಿ ಮಾತಾಡಿದ್ದೂ ನಾವಿಕರ ರೋಷಕ್ಕೆ ಕಾರಣವಾಯಿತು.

ಸಂಪುಗಾರರು ಸರದಾರ ವಲ್ಲಭಭಾಯಿಯವರ ಸಲಹೆ ಪ್ರಕಾರ ಸಂಪು ಹಿಂತೆಗೆದುಕೊಂಡು ತಮ್ಮ ಸಂಕಷ್ಟಗಳನ್ನು ಈಗ ಹಿಂದಿ ಜನತೆಯ ಸ್ವಾಧೀನಪಡಿಸಿದ್ದಾರೆ. ಸರದಾರ ವಲ್ಲಭಭಾಯಿಯವರು ಸಂಪುಗಾರರಲ್ಲಿ ಯಾರಿಗೂ ಅನ್ಯಾಯವಾಗದಂತೆ ನೋಡಿಕೊಳ್ಳುವ ಹೊಣೆ ಹೊತ್ತಿರುವರು.

### ಕರಾಚಿಯಲ್ಲಿ

ತಾ. ೨೩ ನೇ ದಿನ ಮುಂಬಯಿ ನಾವಿಕರಿಗೆ ಸಹಾನುಭೂತಿ ಪ್ರದರ್ಶಿಸಲು ಕರಾಚಿಯಲ್ಲಿ ಹರತಾಳವಾಯಿತು. ಕೆಲವರು ಕರಾಚಿ ಮ್ಯುನಸಿಪಾಲಿಟಿ ಆಕ್ರಮಿಸಲು ಪ್ರಯತ್ನಿಸಿದರು. ಅವರನ್ನು ಸೆರೆಹಿಡಿಯಲಾಯಿತು. ಇದಗಾ ಮೈದಾನದಲ್ಲಿ ಜನರು ಕೂಡಿರಲು ಪೋಲೀಸರು ಅವರನ್ನು ಚದುರಿಸಲು ಲಾಠಿ ಹಲ್ಲೆ ಮಾಡಿದರು ಆದರೆ ಅದರಿಂದ ಬಗೆಹರಿಯದ್ದರಿಂದ ಕಡೆಗೆ ಅವರು ಗೋಳೀಬಾರ ಮಾಡಬೇಕಾಯಿತು ಇದರಂತೆ ವಿಜಗಪಟ್ಟಣ, ಮದ್ರಾಸ, ಕಲಕತ್ತಾ ಮೊದಲಾದ ಕಡೆಗಳಲ್ಲಿಯೂ ನಾವಿಕರು ಸಹಾನುಭೂತಿಪರ ಸಂಪು ಹೂಡಿದ್ದರು.

### 'ಟೋಳಿನಾಯಕರನ್ನು ದಂಡಿಸುವೆವು'

ನಾವಿಕರ ಸಂಪು ಮತ್ತು ದಂಗೆಯೆಲ್ಲ ಶಾಂತವಾದ ಬಳಿಕ ಹಿಂದುಸ್ತಾನ ಮತ್ತು ಬ್ರಿಟಿಶ ಸರಕಾರ ತಮ್ಮ ಹಲ್ಲು ತೋರಿಸತೊಡಗಿವೆ. ಮುಖ್ಯ ಸೇನಾಪತಿ ಜನರಲ್ ಕ್ಲಾಡ ಅಚಿನಲೆಕ್ಕರು ಶಿಸ್ತಿನ ಪಲ್ಲವಿ ಹಾಡಲು ಆರಂಭಿಸಿದ್ದಾರೆ. ಸಾಮೂಹಿಕ ಪ್ರತೀಕಾರವನ್ನು ಕೈಕೊಳ್ಳುವದಿಲ್ಲವೆಂದು ಅವರು ಆಶ್ವಾಸನ ಕೊಡುತ್ತಿದ್ದರೂ "ಟೋಳಿ ನಾಯಕ"ರನ್ನು ದಂಡಿಸದೆ ಬಿಟ್ಟರೆ ಸಶಸ್ತ್ರ ಬಲದಲ್ಲಿ "ಅವಿಧೇಯತೆಗೆ ಪುಟಕೊಟ್ಟಂತಾಗುವದು." ಎಂದು ಹೇಳುತ್ತಾರೆ. "ನ್ಯಾಯವಾದ ದೂರುಗಳನ್ನು ವಿಚಾರಿಸಲಾಗುವದು. ಮತ್ತು ವಿಚಾರಿಸಲಾಗುತ್ತಿದೆ. ಆದರೆ ಕೆಲವು ಜನರ ಇಚ್ಛೆಯನ್ನು ಪೂರೈಸುವದು ಸಾಧ್ಯವಿಲ್ಲೆಂದು ಸ್ಪಷ್ಟವಾಗಿ ಹೇಳಿಬಿಡುವೆವು" ಎಂದೂ "ಅಮೇರಿಕನ್ನರಷ್ಟು ಸಂಬಳ ಬ್ರಿಟಿಶ ಸೈನಿಕರಿಗೆ ಸಿಗುವದು ಹೇಗೆ ಸಾಧ್ಯವಿಲ್ಲವೊ ಹಾಗೆಯೆ ಬ್ರಿಟಿಶರಷ್ಟು ಸಂಬಳ ಹಿಂದೀಯರಿಗೆ ದೊರೆಯಲಾರದು" ಎಂದೂ ಅವರ ಅಂಬೋಣ ಅಚಿನಲೆಕ್ಕರ ಈ ಧೋರಣೆಗೆ ಬ್ರಿಟಿಶ ಸರಕಾರದ ಪೂರ್ಣ ಬೆಂಬಲವಿದೆಯೆಂದು ಆಟ್ಲೀಯವರು ಪಾರ್ಲಿಮೆಂಟಿನಲ್ಲಿ ಹೇಳಿದ್ದಾರೆ.

"ಟೋಳಿ ನಾಯಕ"ರನ್ನು ದಂಡಿಸುವ ಧೋರಣೆಯ ಪ್ರಾರಂಭ ಈಗಾಗಲೆ ಆಗಿ ಬಿಟ್ಟದೆ. ಮುಂಬಯಿ ಕ್ಯಾಸಲ ಬರಾಕುಗಳ ಮತ್ತು ಹಿಂದೀ ನೌಕಾಪಡೆಯ ೩೬ ನಾವಿಕರನ್ನು ಈಗಾಗಲೆ ಬಂಧಿಸಿ ಅಜ್ಞಾತ ಸ್ಥಳಕ್ಕೆ ಒಯ್ಯಲಾಗಿದೆಯೆಂದು ವರದಿಯಾಗಿವೆ. "ತಲವಾರ" ಹಡಗದಿಂದ ೧೪ ಜನರನ್ನು ಬಂಧಿಸಲಾಗಿದೆ. ಅವರಲ್ಲಿ ಕೇಂದ್ರ ಸಂಪಿನ ಸಮಿತಿಯ ಅಧ್ಯಕ್ಷ ಎಂ ಎಚ್ ಖಾನ' ಉಪಾಧ್ಯಕ್ಷ ಮದನ ಸಿಂಗ ಹಾಗು ಕಾರ್ಯದರ್ಶಿ ಹಮೀದ ಅಕಬರರೂ ಆ ಹಡಗಿನ ತಂತಿ ಖಾತೆಯ ಪ್ರಮುಖ ನೌಕರರೂ ಇದ್ದಾರೆ.

### ಮುಂದಾಳುಗಳ ಎಚ್ಚರಿಕೆ

ಕಾಂಗ್ರೆಸ್ ಅಧ್ಯಕ್ಷರಾದ ಮೌಲಾನಾ ಅಬುಲ ಕಲಮ ಆಝಾದರು ಸರಕಾರದ ಈ ಧೋರಣೆಯನ್ನು ಕುರಿತು ಸೈನ್ಯದಲ್ಲಿ ಶಿಸ್ತು ಅವಶ್ಯವೆಂದು ಒಪ್ಪಿದರೂ ಸಂಕುಚಿತ ಶಿಸ್ತಿನ ಹೆಸರಿನಲ್ಲಿ ಟೋಳಿನಾಯಕರೆಂದು ಸಂಪುಗಾರರನ್ನು ದಂಡಿಸುವದು ತರವಲ್ಲೆಂದು ಹೇಳಿ "ರಾಷ್ಟ್ರೀಯ ಭಾವನೆಯನ್ನು ಎಗ್ಗು ಬಡಿಯುವ ಪ್ರಯತ್ನಗಳನ್ನು ಸಹಿಸುವ ಮನೋಭಾವದಲ್ಲಿ ಹಿಂದುಸ್ತಾನದಲ್ಲಿ ಇಂದು ಇಲ್ಲ" ಎಂದು ಎಚ್ಚರಿಸಿದ್ದಾರೆ.

ಜವಾಹರಲಾಲರೂ ಇಥೇ ಭಾವವನ್ನು ಪ್ರದರ್ಶಿಸಿ ಮಿಲಿಟರಿ ಮತ್ತು ಪೋಲೀಸರ ವಿವೇಕಗೆಟ್ಟ ಗೋಳೀಬಾರಿನ ವಿಷಯಕ್ಕೆ ಒಡನೆ ವಿಚಾರಣೆಯಾಗಬೇಕೆಂದೂ ನಾವಿಕರನ್ನು ವಿಚಾರಣೆಗೆ ಗುರಿಪಡಿಸಿದರೆ ಅವರಿಗೆ ಕಾಯಿದೆ ಸಹಾಯ ನೀಡಬೇಕೆಂದೂ ಹೇಳಿದರು. ಪಂಡಿತ ಜವಾಹರರು ಈ ಗಲಭೆಗಳ ಸುದ್ದಿ ಕೇಳಿ ತಮ್ಮ ಬಿಹಾರ ಸಂಚಾರ ಕಾರ್ಯಕ್ರಮವನ್ನು ರದ್ದುಗೊಳಿಸಿ ಮುಂಬಯಿಗೆ ಬಂದು ಪರಿಸ್ಥಿತಿಯನ್ನು ಅಭ್ಯಸಿಸುತ್ತಿದ್ದಾರೆ.

ಸರದಾರ ಪಟೇಲರೂ ಶಿಸ್ತಿಗೆ ಮಹತ್ವವಿದ್ದರೂ ಹಿಂದುಸ್ತಾನ ಮಾತ್ರವಲ್ಲ, ಏಶಿಯಾದಲ್ಲೆಲ್ಲ, ಬದಲಿಸಿದ ಪರಿಸ್ಥಿತಿಯನ್ನನುಲಕ್ಷಿಸಿ ಶಿಸ್ತಿನ ವ್ಯಾಖ್ಯೆ ಮಾಡಬೇಕೆಂದು ಸೂಚಿಸಿದ್ದಾರೆ.

---

ಮದ್ರಾಸ ಶಾಸನ ಸಭೆಗಳ ಚುನಾವಣೆ ಮಾರ್ಚ ೧ ರಿಂದ ಆರಂಭವಾಗುವುದು. ಮತದಾನ ೧೮ನೇ ತಾ. ನಿಂದ.

# ಅಂತರ್ ರಾಷ್ಟ್ರೀಯ

## ಬ್ರಿಟಿಶ ವಿದೇಶ ಧೋರಣೆ

ಕಳೆದ ವಾರ ಬ್ರಿಟಿಶ ಪಾರ್ಲಿಮೆಂಟಿನಲ್ಲಿ ವಿದೇಶ ಮಂತ್ರಿ ಬೆವಿನ್ನರು ರಶಿಯಾದ ಕಡೆಗೆ ಬ್ರಿಟಿಶ ಸರಕಾರದ “ ಬೀಸಿಹೊಡೆಯುವ ” ಆದರೂ “ ಗೆಳೆತನ ” ದ ಧೋರಣವನ್ನು ವಿವರಿಸಿದರು. ಸೋವಿಯೆಟ್ ರಾಜ್ಯದ ಸುತ್ತ ಸ್ನೇಹಯುಕ್ತ ರಾಷ್ಟ್ರಗಳ ಗುಂಪು ಬೇಕೆಂದು ಮಾಸ್ಕೋ ಮುತ್ಸದ್ದಿಗಳು ಬಯಸುವಂತೆ ನಮ್ಮ ಇಂಗ್ಲೀಷ ಕಡಲ್ಗಾಲುವೆಯ ಆಚೆಗೆ ನಮ್ಮೊಡನೆ ಗೆಳೆತನ ಬೆಳೆಸಬಯಸುವ ರಾಜ್ಯಗಳನ್ನು ನಾವೂ ಅಪೇಕ್ಷಿಸುವದರಲ್ಲಿ ತಪ್ಪೇನೆಂದು ಅವರು ಕೇಳಿದರು. ರಶಿಯಾದೊಡನೆ ಯುದ್ಧಕ್ಕೆ ಬ್ರಿಟಿಶ ಸರಕಾರ ಹಾತೊರೆಯುತ್ತಿದೆಯೆಂಬ ಆರೋಪವನ್ನು ಅವರು ನಿರಾಕರಿಸಿ ಅಂಥ ವಿಚಾರ ಬ್ರಿಟಿಶ ಸರಕಾರದ ಬುದ್ಧಿಯಲ್ಲಿ ಸುಳಿದು ಕೂಡ ಇಲ್ಲವೆಂದು ಸ್ಪಷ್ಟಗೊಳಿಸಿದರು. ಬದಲಿಗೆ ಬ್ರಿಟಿಶ ಸರಕಾರ, ರಶಿಯಾ ಬ್ರಿಟನ ಸ್ನೇಹ ಒಪ್ಪಂದವನ್ನು ೩೦ ವರ್ಷಕಾಲ ಅವಧಿಗೆ ಬೆಳೆಸಬೇಕೆಂಬ ಸೂಚನೆಯನ್ನು ಸೋವಿಯೆಟ ಸರಕಾರದ ಮುಂದೆ ೨ ತಿಂಗಳ ಹಿಂದೆಯೆ ಮಂಡಿಸಿದೆಯೆಂಬ ಅಂಶವನ್ನು ಹೊರಗೆಡಹಿದರು. ರಶಿಯನ ಉಪವಿದೇಶಮಂತ್ರಿ ವಿಶಿನ್‌ಸ್ಕಿ —ಬೆವಿನ್ನರ ಸ್ನೇಹ ವಿಶಿನ್‌ಸ್ಕಿ ಲಂಡನಿಗೆ ಬರುವಾಗ ಇದ್ದುದಕ್ಕಿಂತ ಅವರು ಹೊರಡುವಾಗ ಹೆಚ್ಚಾಗಿತ್ತೇ ಹೊರತು ಕಡಿಮೆಯಾಗಿದ್ದಿಲ್ಲೆಂದು ಅವರು ಹೇಳಿ ಬೆವಿನ್—ವಿಶಿನ್‌ಸ್ಕಿ ಕಚ್ಚಾಟ ವೈಯಕ್ತಿಕ ದ್ವೇಷದ ರೂಪ ಧರಿಸಿತ್ತೆಂಬ ಪತ್ರಿಕಾ ವರದಿಗಳನ್ನು ನಿರಸನಗೊಳಿಸಿದರು.

ಇನ್ನುಳಿದ ಅಂಶಗಳಲ್ಲಿ, ಜರ್ಮನಿಯ ರೂಹ್ರ ಔದ್ಯೋಗಿಕ ಪ್ರದೇಶವನ್ನು- ಅಂತರ್‌ರಾಷ್ಟ್ರೀಯ ಆಡಳಿತೆಗೊಳಪಡಿಸಬೇಕು, ಇಟಲಿಗೆ ಪ್ರಜಾತಂತ್ರಾತ್ಮಕ ರಾಜ್ಯವಾಗಿ ರೂಪುಗೊಳ್ಳಲು ಸಹಾಯ ಮಾಡಬೇಕು, ಇರಾಣದಂಥ ಕಚ್ಚಾ ಪದಾರ್ಥಗಳನ್ನುಳ್ಳ ಚಿಕ್ಕ ರಾಷ್ಟ್ರವನ್ನು ಅಂತರ್‌ರಾಷ್ಟ್ರೀಯ ರಕ್ಷಣೆಗೊಳಪಡಿಸಬೇಕು. ಇತ್ಯಾತಿಯಾಗಿ ಅವರು ಬ್ರಿಟಿಶ ನಿಲುವೆಯನ್ನು ವಿವರಿಸಿದರು. ಬ್ರಿಟಿಶ ಸಾಮ್ರಾಜ್ಯದ ಮಟ್ಟಿಗೆ ಮಾತ್ರ, ಅದು ಛಿನ್ನವಿಚ್ಛಿನ್ನವಾಗುವ ಸಂಭಾವ್ಯತೆಯನ್ನು ಸಹಿಸಲು ಕೂಡ ಬೆವಿನ್ನರು ಸಿದ್ಧರಿದ್ದಿಲ್ಲ. ಏಕೆಂದರೆ “ ಸ್ವಾತಂತ್ರ್ಯಪ್ರಿಯ ರಾಷ್ಟ್ರಗಳ ಈ ಸಂಘ ಒಡೆದರೆ ಜಗತ್ತಿಗೊಂದು ಅತ್ಯಂತ ಅಪಾಯಕಾರಿ ಅನಾಹುತವೇ ಒದಗಿದಂತೆ ” ಎಂಬುದು ಅವರ ಪ್ರತೀತಿ.

## ಪ್ರಸಂಗಿಕ ಒಗ್ಗಟ್ಟು

ಜನರಲ್ ಡಿಗಾಲೆಯ ಅಸ್ತಮಾನದೊಡನೆ ಫ್ರಾನ್ಸಿನಲ್ಲಿ ಒಗ್ಗಟ್ಟಿನ ಬೇರುಗಳು ಬಲಗೊಳ್ಳುವ ಲಕ್ಷಣಗಳು ತೋರಿಬರುತ್ತಿವೆ. ಸಾಮ್ಯವಾದಿ ಮತ್ತು ಕಮ್ಯುನಿಸ್ಟ ಪಕ್ಷಗಳ ನಡುವೆ ಹೆಚ್ಚಿನ ಸೌಹಾರ್ದ, ಸಹಕಾರ ಬೆಳೆಸುವ ಪ್ರಯತ್ನಗಳು ಇದೀಗ ಹೆಚ್ಚು ಸಫಲವಾಗುತಿವೆ. ಸಾಮ್ಯವಾದಿ ಪಕ್ಷದ ಸಂಯುಕ್ತ ಪ್ರತಿನಿಧಿ ಮಂಡಲದ ಗುಪ್ತ ಸಭೆಯಲ್ಲಿ ಇಂಥ ಗೊತ್ತುವಳಿಯೊಂದು ಸ್ವೀಕೃತವೂ ಆಗಿದೆ.

ಕಮ್ಯುನಿಸ್ಟರು, ತಮ್ಮ ಪಾಲಿಗೆ, ತಮ್ಮ ಧೋರಣೆಯನ್ನು—ಮುಖ್ಯವಾಗಿ ಸಾಮ್ರಾಜ್ಯದ ವಿಷಯಕ್ಕೆ—ಸ್ವಲ್ಪ ಬದಲಿಸುತ್ತಿರುವರು. ಇಂಡೋ ಚೀನವನ್ನು ಫ್ರೆಂಚ ಸಾಮ್ರಾಜ್ಯದೊಳಗೇ ಉಳಿಸಿಕೊಳ್ಳಬೇಕೆಂಬ ಭಾವವನ್ನು ಅವರೀಗ ಪ್ರದರ್ಶಿಸತೊಡಗಿದ್ದಾರೆ.

೨೦ ಡಿಗಾಲೆ ಪಕ್ಷದ ಸೇನಾಪತಿಗಳು ಕಳೆದ ವಾರ ಫ್ರೆಂಚ ಸೈನ್ಯಕ್ಕೆ ರಾಜೀನಾಮೆ ಕೊಟ್ಟರು. ಅಧಿಕಾರಕ್ಕೆ ಮರಳುವ ಸಲುವಾಗಿ ಡಿಗಾಲೆ ಸೈನ್ಯವನ್ನು ಉಪಯೋಗಿಸುವನೆಂಬ ಸಂಶಯವನ್ನು ಎಡ ಪಕ್ಷದವರು ಆಗಾಗ್ಗೆ ವ್ಯಕ್ತಗೊಳಿಸ್ದುಂಟು. ಡಿಗಾಲೆ ಪಕ್ಷದ ಸೇನಾಪತಿಗಳ ರಾಜೀನಾಮೆ ಡಿಗಾಲೆ ಪ್ರಭಾವವನ್ನು ಫ್ರೆಂಚ ಸೇನೆಯಿಂದ ಉಚ್ಚಾಟನ ಮಾಡುವ ಕ್ರಿಯೆಯ ಪ್ರಾರಂಭವೆಂದು ಭಾವಿಸಲ್ಪಟ್ಟಿದೆ.

## ಫ್ರಾಂಕೋನ ಭಯೋತ್ಪಾದಕ ರಾಜ್ಯ

ತನ್ನ ತಲೆ ಉಳಿಸಿಕೊಳ್ಳುವ ಕೊನೆಯ ಪ್ರಯತ್ನಗಳಲ್ಲಿಯೋ, ಅಥವಾ ತನ್ನ ಸ್ಥಾನದ ಭದ್ರತೆಯ ಧೈರ್ಯದಿಂದಲೋ ಸ್ಪೇನದ ಸರ್ವಾಧಿಕಾರಿ ಜನರಲ್ ಫ್ರಾಂಕೋ ಹೊಸ ರಕ್ತ ಮಜ್ಜನವನ್ನು ಪ್ರಾರಂಭಿಸಿದ್ದಾನೆ. ಕೆಲ ದಿನಗಳ ಕೆಳಗೆ ಸ್ಪೇನಿನ ಪ್ರಜಾಸತ್ತಾವಾದಿಯೂ ಫ್ರೆಂಚ್ ಕೂಟ ಸೈನ್ಯದಲ್ಲಿ ಸೇರಿ ಜರ್ಮನರೊಡನೆ ಹೋರಾಡಿದವನೂ ಆ ಕ್ರಿಸ್ಟಿನೋ ಗಾರ್ಸಿಯಾ ಮತ್ತು ಒಂಭತ್ತು ಜನ ಇತರರನ್ನು ಸಾಮ್ಯವಾದಿ ಗೌಪ್ಯ ಸಂಘವೊಂದನ್ನು ಸಂಘಟಿಸುವ ಪ್ರಯತ್ನ ಮಾಡಿದರೆಂದು ಮಾದ್ರಿದದಲ್ಲಿ ಗಲ್ಲಿಗೇರಿಸಲಾಯಿತು. ಇನ್ನೂ ಹಲವರನ್ನು ಇದೇ ಆರೋಪವಿಟ್ಟು ವಿಚಾರಣೆಗೆ ಗುರಿಪಡಿಸಲಾಗಿದೆ.

ಗಾರ್ಶಿಯಾನ ಗಲ್ಲಿನ ಪರಿಣಾಮ ವಿಸ್ತಾರವಾಗಿ ಹಬ್ಬಿದೆ. ಫ್ರೆಂಚ ಮಂತ್ರಿಮಂಡಲದವರು ದೀರ್ಘ ಮಂತ್ರಾಲೋಚನೆಯ ನಂತರ ಇದೇ ಶುಕ್ರವಾರದಿಂದ ಫ್ರೆಂಚ್ ಸ್ಪೇನಿಶ್ ಗಡಿಯನ್ನು ಮುಚ್ಚಿಬಿಡುವ ನಿರ್ಣಯ ಮಾಡಿದ್ದಲ್ಲದೆ ಫ್ರಾಂಕೋನ ಈ ಕೃತಿಯನ್ನು ನಿಷೇಧಿಸುವ ರಾಯಸ ಕಳಿಸಿದ್ದಾರೆ. ಸಾಲದ್ದಕ್ಕೆ ಅವರು ಫ್ರಾಂಕೋನೊಡನಿದ್ದ ರಾಜಕೀಯ ಸಂಬಂಧವನ್ನು ಕಡಿದುಕೊಂಡು ಸ್ಪೇನಿಶ್ ಸರಕಾರದ ಕೃತಿಗಳು ಅಂತರ್‌ರಾಷ್ಟ್ರೀಯ ಶಾಂತಿಗೆ ಭಂಗ ತರುವಂಥವೆಂದು ಭದ್ರತಾ ಮಂಡಲದ ಮುಂದೆ ದೂರು ತರುವ ಸಂಭವವಿದೆ. ಬ್ರಿಟಿಶ ಸರಕಾರವೂ ಗಾರ್ಶಿಯಾನ ಗಲ್ಲಿನಿಂದ ಬ್ರಿಟಿಶ ಜನಾಭಿಪ್ರಾಯದ ಮೇಲಾದ ಅಗಾಧ ಪರಿಣಾಮವನ್ನು ಸೂಚಿಸಿ ಎಚ್ಚರಿಸಿದ್ದಾರೆ.

## ಮಾಸ್ಕೋದ ಒಪ್ಪಿಗೆ

ಅತ್ಯಂತ ಅನಿರೀಕ್ಷಿತ ಮುಹೂರ್ತದಲ್ಲಿ ಅತ್ಯಂತ ಅನಿರೀಕ್ಷಿತ ಕೆಲಸಗಳನ್ನು ಮಾಡುವ ಪ್ರಸಿದ್ಧಿಯುಳ್ಳ ಮಾಸ್ಕೋ ರಾಜಕಾರಣಿಗಳು ಕೆನಡಾದಲ್ಲಿ ತಮ್ಮ ಗೂಢಚಾರರು ಪರಮಾಣು ಬಾಂಬಿನ ಗುಟ್ಟುಗಳನ್ನು ಸಂಪಾದಿಸಿದ್ದಾರೆಂಬ ಮಾತನ್ನು ನೇರವಾಗಿ ಒಪ್ಪಿಕೊಂಡು ಜಗತ್ತನ್ನು ಇನ್ನೊಮ್ಮೆ ಚಕಿತಗೊಳಿಸಿದ್ದಾರೆ. ಆದರೆ ಅವರು “ಕೆನೇಡಿಯನ್ ಪ್ರಜೆಗಳಿಂದ” ದೊರಕಿಸಿಕೊಂಡ ಪರಮಾಣು ರಹಸ್ಯಗಳು “ಅಲ್ಪ ಮಹತ್ವದವುಗಳು” ಹಾಗೂ ಈಗ ದೊರಕಿಸಿಕೊಂಡ ಗುಟ್ಟುಗಳಿಗಿಂತಲೂ ಸೋವಿಯೆಟ್ ವಿಜ್ಞಾನಿಗಳು ಮೊದಲೇ ಮುಂದುವರಿದಿದ್ದರೆಂದು ಕಂಡುಬಂದಿದೆಯೆಂದು ಅವರ ಹೇಳಿಕೆ. ಈ ಹೇಳಿಕೆಯ ಬೆನ್ನಿಗೇ ರಶಿಯನ್ ಪತ್ರಿಕೆಗಳು, ಈ ಚಿಲ್ಲರೆ ವಿಚಾರವನ್ನು ಬೆಟ್ಟವಾಗಿ ಮಾಡಿ ಸೋವಿಯೆಟ್ ವಿರೋಧಿ ಪ್ರಚಾರವನ್ನು ಸಾಗಿಸಿರುವ ಕೆನೇಡಿಯನ್ ಪತ್ರಿಕೆಗಳನ್ನೂ ಸರಕಾರವನ್ನೂ ನಿಷ್ಠುರವಾಗಿ ಖಂಡಿಸುತ್ತಿವೆ. ಈ ಪ್ರಚಾರ ಕೆನಡಾ-ಸೋವಿಯೆಟ್ ಸಖ್ಯಕ್ಕೆ ಘಾತಕವಾಗಿದೆಯೆಂದೂ ಅವು ಎಚ್ಚರಿಸಿವೆ.

ಅಟ್ಲಾಂಟಿಕದ ಆ ತೀರದಲ್ಲಿ “ಪರಮಾಣು ಕಳ್ಳ” ರನ್ನು ಹಿಡಿಯುವ ದೊಡ್ಡ ಸತ್ರವೇ ನಡೆದಿದೆ. ಕೆನಡಾದಲ್ಲಿ ಅನೇಕ ವಿಶ್ವವಿದ್ಯಾಲಯಗಳನ್ನು ಕೂಡ ಝಡತಿ ಮಾಡಲಾಗಿದೆ. ಪರಮಾಣು ಕಳ್ಳರ ಗುರುವೆಂದು ಭಾವಿಸಲ್ಪಟ್ಟ ರಶಿಯನ್‌ನೊಬ್ಬನನ್ನು ಬಂಧಿಸಲಾಗಿದ್ದು ಅವನನ್ನೂ ಅವನ ಹೆಂಡತಿಯನ್ನೂ ಮಗುವನ್ನೂ ವಿಷಪ್ರಯೋಗದಿಂದ ಕೊಲ್ಲುವ ಪ್ರಯತ್ನವನ್ನು ಅಜ್ಞಾತ ವ್ಯಕ್ತಿಗಳು ನಡೆಸಿದರೆಂದು ಹೇಳಲಾಗಿದೆ. ಸಂಯುಕ್ತ ಸಂಸ್ಥಾನ ಅಮೇರಿಕಾದ ಪರಮಾಣು ಸಂಶೋಧನ ಯೋಜನೆಯ ಮುಖ್ಯಸ್ಥರಾದ ಜ. ಗ್ರೋವ್ಸರು “ ಈ ಕಳೆದ ನಾಲ್ಕು ವಾರಗಳಲ್ಲಿ ಅಮೇರಿಕೆ ಕಳೆದುಕೊಂಡ ಪರಮಾಣು ರಹಸ್ಯಗಳಷ್ಟು ಇಡೀ ಸಂಶೋಧನ ಕಾಲದಲ್ಲಿ ಕೂಡ ಕಳೆದುಕೊಂಡಿಲ್ಲ'' ಎಂದು ಹೇಳಿದ್ದಾರೆ.

## ಇಜಿಪ್ತದಲ್ಲಿ “ಚಲೇಜಾವ”

ಇಜಿಪ್ತದ “ಚಲೇಜಾವ” ಚಳವಳಿ ಕಡಿಮೆಯೆಂದರೆ ಹಿಂದೀ ಚಳವಳಿಯಷ್ಟೇ ಭಯಂಕರವಾಗಿಬಿಟ್ಟಿದೆ. ಕಾಯರೋದಲ್ಲಿ ಕಳೆದ ವಾರ ಸಾವಿರಗಟ್ಟಲೆ ವಿದ್ಯಾರ್ಥಿಗಳು “ಬ್ರಿಟಿಶರು ತೊಲಗಲಿ” ಘೋಷಣೆಗಳೊಂದಿಗೆ ಕಾಯರೋ ಬೀದಿಗಳಲ್ಲಿ ಪ್ರದರ್ಶನ ಮಾಡುತ್ತ ಬ್ರಿಟಿಶ ಸೈನ್ಯಗಳ ಬರಾಕುಗಳಲ್ಲಿ ನುಗ್ಗಿ ಗೊಂದಲ ಹಾಕಿದರು. ಬ್ರಿಟಿಶ ಸೈನ್ಯಗಳು “ಆತ್ಮರಕ್ಷಣೆ”ಗಾಗಿ ಗುಂಡು ಹಾರಿಸಿದವು. ೧೭ ಜನ ಸತ್ತರು, ೩೦೦ ಜನ ಗಾಯಗೊಂಡರು. ಸಂಯೋಗವಶದಿಂದ ಇದು ಫೆ. ೨೧ಕ್ಕೆ-ಮುಂಬಯಿಯಲ್ಲಿ ನಾವಿಕರು ದಂಗೆಯೆದ್ದ ದಿನವೇ ಸಂಭವಿಸಿತು. ಅದಕ್ಕಿಂತಲೇ ಮೊದಲು ೪೦,೦೦೦ ವಿದ್ಯಾರ್ಥಿಗಳು ಸಹಿ ಹಾಕಿದ ರಕ್ಕಸ ಮನವಿಯೊಂದು ರಾಜಾ ಫರೂಕರಿಗೆ ಕಳಿಸಲ್ಪಟ್ಟಿತ್ತು. “ಬ್ರಿಟಿಶ ಸೈನ್ಯಗಳು ಇಜಿಪ್ತದಿಂದ ಹೊರಟು ಹೋಗಬೇಕು, ಅಂಗ್ಲೋ—ಇಜಿಪ್ಶನ್ ಸುಡಾನ ಬ್ರಿಟಿಶ ಹಿಡಿತದಿಂದ ಮುಕ್ತವಾಗಬೇಕು” ಎಂಬುದು ಆ ಮನವಿಯ ಸಾರ.

ಈ “ಗುಂಡಾ ರಾಜ್ಯ” “ಬ್ರಿಟಿಶ ಸೈನಿಕರ ಕರ್ತವ್ಯದಲ್ಲಿ ಅಡಚಣೆ ಒಡ್ಡುವ ಪ್ರದರ್ಶನ”ಗಳ ವಿರುದ್ಧ ಬ್ರಿಟಿಶ ರಾಯಭಾರಿ ಇಜಿಪ್ಶನ್ ಮಂತ್ರಿಗಳಿಗೆ ಪ್ರತಿಭಟನೆ ಕಳಿಸಿದ್ದಾನೆ. ಹಿಂದಿನ ಮಂತ್ರಿಗಳಂತೆ ಬ್ರಿಟಿಶ ಪ್ರಭುಗಳ ಕಹಿ ಗುಳಿಗೆಗಳನ್ನು ಈ ಮಂತ್ರಿಮಂಡಲ ನುಂಗಿ “ಸಿಹಿ”ಯೆಂದು ನಟಿಸುವ ಹಾಗೆ ತೋರಲಿಲ್ಲ. ಹೊಸ ಮುಖ್ಯ ಮಂತ್ರಿ ಸಿದ್ದಿಕಿ ಪಾಶಾ ಆ ಗುಳಿಗೆಗಳನ್ನೆ ತಿರುಗಿ ಕೊಟ್ಟು— ಇವಕೆಲ್ಲ ಬ್ರಿಟಿಶರೇ ಹೊಣೆ. ನಮ್ಮ ದೇಶದ ವಿದ್ಯಾರ್ಥಿಗಳಿಗೆ ತಮ್ಮ ಮತವನ್ನು ಶಾಂತ ರೀತಿಯಿಂದ ಪ್ರದರ್ಶನ ಮಾಡುವ ಹಕ್ಕು ಇದೆ. ಆದರೆ ಈ ಪ್ರದರ್ಶನದ ಮೇಲೆ ಬ್ರಿಟಿಶ ಮಿಲಿಟರಿ ವಾಹನಗಳು ಏರಿ ಬಂದು ಹಲವರಿಗೆ ಗಾಯ, ಒಬ್ಬನಿಗೆ ಮರಣ ಉಂಟು ಮಾಡಿದವು. ಜನ ಸಹನೆಗೆಟ್ಟು ಹೋದರು—ಎಂದು ತಿಳಿಸಿದರು. ಬ್ರಿಟಿಶರು ಇದರಿಂದ ಮತ್ತಷ್ಟು ಸಿಟ್ಟಿಗೆದ್ದು ಆ ವಾಹನಗಳನ್ನು ತಡೆದು ಜನರು ಅವುಗಳ ಮೇಲೆ ಏರಿ ಹೋದುದರಿಂದಲೇ ಅವರ ಮೇಲೆ ಕ್ರಿಯೆ ಕೈಕೊಳ್ಳಬೇಕಾಯಿತು. ಇಂಥ ಪ್ರದರ್ಶನಗಳಿಗೆ ತಿಳಿದೂ ತಿಳಿದೂ ಸಮ್ಮತಿ ಕೊಟ್ಟ ಇಜಿಪ್ಶನ್ ಸರಕಾರವೆ ಈ ಗಲಭೆಗೆ ಹೊಣೆ. ಹಿಂದಿನ ಮಂತ್ರಿಮಂಡಲ ವಿದ್ಯಾರ್ಥಿ ಪ್ರದರ್ಶನಗಳನ್ನು ಪ್ರತಿಬಂಧಿಸಿತ್ತು. ಈಗಿನದು ಆ ಪ್ರತಿಬಂಧವನ್ನು ಹಿಂತೆಗೆದುಕೊಂಡುದೇಕೆಂದೇ ಗಲಭೆಗೆ ಕಾರಣವಾಯಿತು.— ಎಂದು ಸಾರಿದ್ದಾರೆ.

ಈ ಗೊಂದಲದ ಪರಿಸ್ಥಿತಿ ಸಾಗಿದಷ್ಟು ದಿನ ಆಂಗ್ಲೋ–ಇಜಿಪ್ಶನರ ನಡುವೆ ಹೊಸ ಒಪ್ಪಂದದ ಮಾತುಕತೆ ಸಾಧ್ಯವೇ ಇಲ್ಲವೆಂಬುದು ಬ್ರಿಟಿಶ ಭಾವವಾಗಿದ್ದರೆ ಬ್ರಿಟಿಶರು ಇಲ್ಲಿರುವಷ್ಟು ದಿನ ಹೊಸ ಒಪ್ಪಂದಕ್ಕೆ ಮಾತುಕತೆ ನಡೆಸಲೇ ಕೂಡದೆಂದು ಇಜಿಪ್ಶನ್ ತೀವ್ರಗಾಮಿಗಳ ಹಟ. ಈ ತೀವ್ರಗಾಮಿಗಳ ನಾಯಕತ್ವ ಇಜಿಪ್ತದ ಮುಸ್ಲಿಂ ಯುವಕ ಸಂಘದ ಕೈಯಲ್ಲಿದೆ.

“ಇಜಿಪ್ತದ ಪರಿಸ್ಥಿತಿ ಸಾಮಾನ್ಯ ತಿಳಿವಳಿಕೆಗಿಂತ ಹೆಚ್ಚು ಇಕ್ಕಟ್ಟಿನದಾಗಿದೆ” ಎಂದು ಪತ್ರಿಕಾ ಪ್ರತಿನಿಧಿ ರಿಚಾರ್ಡ ವಿಂಡ್ಹ್ಯಾಂ ಬರೆಯುತ್ತಾನೆ. “ಮುಂಚಿನಂತೆ ತಮಗೆ ಬೇಕಾದವರನ್ನು ಮಂತ್ರಿಪದಕ್ಕೇರಿಸಿ ಬ್ರಿಟಿಶರು ತಮ್ಮ ಇಚ್ಛೆಯ ಒಪ್ಪಂದದ ಶರ್ತಗಳನ್ನು ಸಾಧಿಸಿಕೊಳ್ಳಲಾರರು. ಈಗ ಅವರು ಹೊರಟುಹೋಗಬೇಕು. ಇಲ್ಲವೇ ಬಲಾತ್ಕಾರವನ್ನೇ ಉಪಯೋಗಿಸಬೇಕು.”

## ಮಾತುಕತೆಯ ಮುನ್ನಡೆ

ಮಾಸ್ಕೋದಲ್ಲಿ ಸಂಧಾನ ನಡೆಸಿರುವ ಹೊಸ ಇರಾಣಿ ಮಂತ್ರಿ ಸುಲ್ತಾನೆಯವರ ಮಾತುಕತೆ ಎಲ್ಲಿವರೆಗೆ ಸಾಗಿದೆಯೆಂದು ಗೊತ್ತಿಲ್ಲ. ಆದರೆ ಈ ಸಂಧಾನಕ್ಕೆ ಸಾಕಷ್ಟು ಯಶಸ್ಸಿನ ಸಂಭಾವ್ಯತೆಯಿದ್ದಂತೆ ತೋರುತ್ತದೆ. ರಶಿಯನ್ನರು ಆಕ್ಷೇಪ ಮಾಡದಿದ್ದರೆ ಈಗ ತಾಬ್ರಿಜ ( ಅಝರಬೈಜಾನ ) ದಲ್ಲಿ ಸ್ಥಾಪಿತವಾಗಿರುವ ಜಾಫರ ಪಿಶೆವಾರಿಯ ಸ್ವಾಯತ್ತ ಅಝರಬೈಜಾನಕ್ಕೆ ಇರಾಣಿ ಮಂತ್ರಿಮಂಡಲ ಮನ್ನಣೆ ಕೊಡಲೊಪ್ಪಬಹುದು. ಪಿಶೆವಾರಿಯಂತೂ ಮಾಸ್ಕೋದಲ್ಲಿ ನಡೆದ ಮಾತುಕತೆಯಿಂದ ಎಳ್ಳಷ್ಟು ಭೀತನಾದಂತೆ ತೋರಲಿಲ್ಲ. ತನ್ನ ಸ್ವಾಯತ್ತ ಪ್ರಾಂತದ ವೆಚ್ಚಕ್ಕೆ ತೆಹರಾಣ ಸರಕಾರ ೧,೫೦,೦೦೦,೦೦೦ ರಿಯಾಲ (೧,೧೫,೩೦೦ ಪೌಂಡು) ಪೂರೈಸದಿದ್ದರೆ ತಾನು ಸಂಘಟಿಸಿದ ಹೊಸ ರಾಷ್ಟ್ರೀಯ ಸೈನ್ಯದೊಡನೆ ತೆಹರಾನದ ಮೇಲೆ ಏರಿ ಹೋಗುವದಾಗಿ ಅವನು ಬೆದರಿಕೆ ಹಾಕಿದ್ದಾನೆ !

ಇರಾಣ ಪತ್ರಿಕಾಪ್ರಪಂಚ ಭಯಂಕರ ಬ್ರಿಟಿಶ ವಿರೋಧಿ ಲೇಖಗಳಿಂದ ಸಿಮ್ಮರಿಸತೊಡಗಿವೆ. ಎಣ್ಣೆ ಗಣಿ ಪ್ರದೇಶದಲ್ಲಿ ಕೂಲಿಕಾರರಿಗೆ ಬ್ರಿಟಿಶರು ಭೀಕರ ತೊಂದರೆ ಕೊಡುತಿದ್ದಾರೆ, ದಕ್ಷಿಣದ ಅನಾಗರಿಕ ಜನಾಂಗಗಳನ್ನು ಹುರಿದುಂಬಿಸಿ ಅವುಗಳಿಗೆ ಶಸ್ತ್ರಾಸ್ತ್ರ ಪೂರೈಸಿ ಇರಾಣ ಸರಕಾರದ ವಿರುದ್ಧ ನಿಲ್ಲಿಸುವ ಸಂಚು ನಡೆಸಿದ್ದಾರೆ, ಎಂದು ಅವು ಆರೋಪಗಳ ಮಳೆಗರೆಯುತ್ತಿವೆ.

## ಮಂಚೂರಿಯಾದಿಂದ “ಚಲೇಜಾವ ! ”

ಚೀನದಲ್ಲಿ ಪ್ರಚಂಡ ರಶಿಯನ್ ವಿರೋಧಿ ಭಾವನೆ ಉದ್ರಿಕ್ತವಾಗಿದೆ. ಮಂಚೂರಿಯಾದಿಂದ ರಶಿಯನ್ ಪಡೆಗಳು ಒಡನೆ ಹೊರಟು ಹೋಗಬೇಕೆಂದು ಸಾವಿರಗಟ್ಟಲೆ ವಿದ್ಯಾರ್ಥಿಗಳು, ಪ್ರೊಫೆಸರರು ನಾನ್‌ಕಿಂಗ್, ಹ್ಯಾಂಕೋ ಮೊದಲಾದ ಪ್ರಮುಖ ವಿಶ್ವವಿದ್ಯಾಲಯ ನಗರಗಳಲ್ಲಿ ಪ್ರದರ್ಶನ ಮಾಡಿದರು. ರಶಿಯಾ ವಿರೋಧಿ ಭಿತ್ತಿಪತ್ರಿಕೆಗಳನ್ನು ಚೀನಿ, ಇಂಗ್ಲಿಷ್, ರಶಿಯನ್ ಭಾಷೆಗಳಲ್ಲಿ ಬರೆದು ಗೋಡೆಗಳ ಮೇಲೆ ಹಚ್ಚಲಾಗಿದೆ. ಗೊಂದಲ ಮಾಡಿ ಪ್ರಯೋಜನವಿಲ್ಲವೆಂದು ಬಾಯಲ್ಲಿ ಹೇಳುತಿದ್ದರೂ ಚೀನಿ ಸರಕಾರವೂ ಈ ಭಾವನೆಗಳಲ್ಲಿ ಭಾಗಿಯಾಗಿದೆ. ಯಾಲ್ಟಾ ಒಪ್ಪಂದದನ್ವಯ ರಶಿಯನ್ನರು ಮಂಚೂರಿಯಾವನ್ನು ಆಕ್ರಮಿಸಿದ್ದರೂ ಆ ಒಪ್ಪಂದದಲ್ಲಿ ಚೀನ ಪಾಲುಗಾರವಾಗಿದ್ದಿಲ್ಲವಾಗಿ ಅದು ಚೀನಕ್ಕೆ ಬಂಧಕವಲ್ಲೆಂದ ಚೀನಿ ಸರಕಾರದ ಹೇಳಿಕೆ.

ರಶಿಯನರು ಸರಳವಾಗಿ ಉತ್ತರ ಹೇಳಿದ್ದಾರೆ. ಇದು ಚೀನದ ಪ್ರತಿಗಾಮಿ ಶಕ್ತಿಗಳ ದುಷ್ಟ ಪ್ರಚಾರ ಜಪಾನರಿಂದ ಮಂಚೂರಿಯಾವನ್ನು ಮುಕ್ತ ಮಾಡಿದ ಕೆಂಪು ಸೇನೆಗೆ ಅಪಮಾನ. ಮಂಚೂರಿಯಾದಿಂದ ಕೆಂಪು ಸೇನೆಯನ್ನು ಹಿಂತೆಗೆಯುವದು ಈಗಾಗಲೆ ಪ್ರಾರಂಭವಾಗಿದೆ. ಈಗಲೂ ನಡೆದಿದೆ. ಅಮೇರಿಕನ್ ಸೈನ್ಯ ಈ ಭಾಗದಿಂದ ಹೊರಟು ಹೋಗುವಷ್ಟರಲ್ಲಿ—ಸಾಧ್ಯವಿದ್ದರೆ ಅದಕ್ಕೂ ಮೊದಲು—ನಾವು ಮಂಚೂರಿಯಾವನ್ನು ಪೂರ್ಣ ಖಾಲಿ ಮಾಡುವವರಿದ್ದೇವೆ.

## ಒಂದೇ ಸೈನ್ಯ

ಚೀನದ ಕಮ್ಯುನಿಸ್ಟ ಮತ್ತು ಚಿಯಾಂಗ್ ಸೈನ್ಯಗಳನ್ನು ಒಂದಾಗಿ ಎರಕ ಹೊಯ್ಯುವ ಒಪ್ಪಂದವೊಂದು ಅಮೇರಿಕನ್ ರಾಯಭಾರಿ ಜನರಲ್ ಮಾರ್ಶಲ್ಲರ ಮಧ್ಯಸ್ಥಿಕೆಯಿಂದ ಚಿಯಾಂಗ್ ಕಮ್ಯುನಿಸ್ಟರಲ್ಲಿ ಆಗಿ ಚೀನ ರಾಷ್ಟ್ರೀಯ ಐಕ್ಯದಲ್ಲಿ ಮತ್ತೊಂದು ಹೆಜ್ಜೆ ಮುಂದಿಟ್ಟಿದೆ. ಚೀನದ ಎಲ್ಲ ಸೈನ್ಯಗಳು ಕೇಂದ್ರ ಸರಕಾರದ ಆಡಳಿತೆಯೊಳಗೆ ಬರುತ್ತವೆ. ಚಿಯಾಂಗರ ಅಧೀನವಾಗುತ್ತವೆ. ಅವರು ಬೇಕಾದವರನ್ನು ತೆಗೆಯಬಹುದು. ಆದರೆ ಕಮ್ಯುನಿಸ್ಟನೊಬ್ಬನನ್ನು ಅಧಿಕಾರ ಸ್ಥಾನದಿಂದ ಕಿತ್ತುಹಾಕಿದರೆ ಇನ್ನೊಬ್ಬ ಕಮ್ಯುನಿಸ್ಟನನ್ನೇ ಆ ಸ್ಥಾನಕ್ಕೆ ನೇಮಿಸಿಕೊಳ್ಳಬೇಕೆಂಬುದೊಂದು ಕರಾರು. ಈ ಒಪ್ಪಂದದಿಂದ ಚೀನವೀಗ ಕೊನೆಯ ಬಾರಿಗೆ ಪಾಳೆಯಗಾರ ಯುಗದಿಂದ ಆಧುನಿಕ ಯುಗಕ್ಕೆ ತಲೆಹಾಕಿದಂತಾಯಿತು.

## ಹಿರೋಶಿಮಾದ ನೆರಳುಗಳು

ಮಿತ್ರರ ಪರಮಾಣು ಬಾಂಬಿನ ಮೊದಲನೆ ಆಹುತಿಯಾದ ಜಪಾನದ ಹಿರೋಶಿಮಾ ನಗರದಲ್ಲಿ ವಿಚಿತ್ರ ಚಮತ್ಕಾರಗಳು ತಲೆದೋರತೊಡಗಿವೆ. ಜಪಾನಿ ಜನರು “ಕೇಜ'' (ನೆರಳು) ಎಂದು ಕರೆಯುವ ಈ ಚಮತ್ಕಾರದಿಂದ ಭಯಗ್ರಸ್ತರಾಗಿ ಅವರು ಆ ಭಾಗದ ಅನೇಕ ಮೈಲುಗಳ ಸಮೀಪಕ್ಕೆ ಬರುವುದಿಲ್ಲ. ಪರಮಾಣು ಕಿರಣಗಳ ವಿಲಂಬಿತ ಕ್ರಿಯೆಯಿಂದಲೋ ಏನೋ ಈ ಭಯಾನಕ ನೆರಳುಗಳು ಉತ್ಪನ್ನವಾಗಿವೆ. ಒಂದೆಡೆ ಒಂದು ಸಂಪೂರ್ಣ ನಿರ್ನಾಮವಾದ ಸೇತುವೆ ನೆರಳಿನ ರೂಪದಲ್ಲಿ ಪ್ರತ್ಯಕ್ಷವಾಗಿದೆ. ಇನ್ನೊಂದೆಡೆ ಹತ್ತುಹನ್ನೆರಡು ವರ್ಷದ ಸಾಲೆ ಹುಡಿಗೆಯೊಬ್ಬಳು ಕಂಕುಳಲ್ಲಿ ಪುಸ್ತಕಗಳನ್ನು ತುರುಕಿಕೊಂಡು ನಿಂತಿರುವ ಸ್ಫುಟವಾದ ನೆರಳು ಕಾಣಿಸಿಕೊಂಡಿದೆ. ಮತ್ತೂ ಒಂದು ಕಡೆ ಎತ್ತಿನ ಗಾಡಿಯೊಂದರ ನೆರಳು-ಎತ್ತು, ಗಾಡಿಗಾರ ಎಲ್ಲ—ಸ್ಪಷ್ಟವಾಗಿ ಗೋಚರಿಸುತ್ತಿದೆ. ಈ

–೧೧ನೇ ಪುಟ ನೋಡಿರಿ

# ಸಾರ್ವಜನಿಕ ಪ್ರಕಟನೆ

**ಆಹಾರಧಾನ್ಯಗಳ ವಿಭಾಗಾಂಶಗಳಲ್ಲಿ ಕಡಿತದ ಬಗ್ಗೆ ೧೯೪೪ ನೇ ಇಸ್ವಿಯ ಹುಬ್ಬಳ್ಳಿ ಸೀದಾ ನಿಯಂತ್ರಣಾಜ್ಞೆಯಲ್ಲಿ ತಿದ್ದುಪಡಿ**

## ಪ್ರಕಟನೆ

ಹಣಕಾಸಿನ ಖಾತೆ (ಪೂರೈಕೆ)
ಮುಂಬಯಿ ಕೋಟೆ, ೨೦ ನೇ ಫೆಬ್ರುವರಿ ೧೯೪೬

**ಮುಂಬಯಿ ಸೀದಾ ಆಜ್ಞೆ, ೧೯೪೩**

ನಂ ೯೬೯ / ೧೬ ಅ) / ಡಿ. ಆರ್. ೧೯೪೩ ನೇ ಮುಂಬಯಿ ಸೀದಾ ಆಜ್ಞೆಯ ೧೨ ನೇ ಕಲಮಿನನುಸಾರವಾಗಿ, ಮುಂಬಯಿ ಗವ್ಹರ್ನರರು ೧೯೪೬ನೇ ಇಸ್ವಿಯ ಫೆಬ್ರುವರಿ ತಿಂಗಳದ ೨೧ನೇ ತಾರೀಖಿನ್ನೊಳಗೊಂಡ ದಿನದಿಂದ ಮುಂದೆ ೧೯೪೪ ನೇ ಹುಬ್ಬಳ್ಳಿ ಸೀದಾ ನಿಯಂತ್ರಣಾಜ್ಞೆಯಲ್ಲಿ ಕೆಳಗಿನಂತೆ ತಿದ್ದುಪಡಿಯನ್ನು ಮಾಡಿರುತ್ತಾರೆ; ಆ ತಿದ್ದುಪಡಿಯು ಯಾವುದೆಂದರೆ-

೧ ಆ ನಿಯಂತ್ರಣಾಜ್ಞೆಯ ೧೯ ನೇ ಕಲಮಿನ (೧) ನೇ ಪೋಟ ಕಲಮಿನಲ್ಲಿ ಮತ್ತು ೩೪ ನೇ ಕಲಮಿನಲ್ಲಿ "೧.೭/೮" ಅಂಕಿಗಳ ಬದಲಾಗಿ "೧.೩/೮" ಅಂಕಿಗಳನ್ನ ಸೇರಿಸಿಕೊಳ್ಳತಕ್ಕದ್ದು; ಹಾಗೂ

೨ ಆ ನಿಯಂತ್ರಣಾಜ್ಞೆಯ ೨೧ ನೇ ಕಲಮಿನಲ್ಲಿ "೧.೭/೮" ಅಂಕಿಗಳ ಬದಲು "೧" ಅಂಕಿಯನ್ನು ಸೇರಿಸತಕ್ಕದ್ದು.

ಸೂಚನೆ- ಭಾರತ ಸಂರಕ್ಷಣ ಕಾಯದೆಯ ೧೧೯ ನೇ ನಿಯಮದ ಉಪನಿಯಮ [೧] ರನ್ವಯ ಈ ಆಜ್ಞೆಯನ್ನು ಕೆಳಗಿನ ಪ್ರಕಾರ ಪ್ರಸಿದ್ಧ ಮಾಡಲಾಗುವದು.

ಅ) ಮುಂಬಯಿ ಸರಕಾರದ ೨೨ ನೇ ಫೆಬ್ರುವರೀ ೧೯೪೬ ನೇ ಎಕ್ಸ್ಟ್ರಾ ಆರ್ಡಿನರೀ ಗ್ಯಾಜೆಟ್ಟದಲ್ಲಿ ಇದನ್ನು ಪ್ರಸಿದ್ಧಿಸಲಾಗುವದು.

ಬ) ಇದನ್ನು ಕೆಳಗಿನ ವರ್ತಮಾನಪತ್ರಗಳಲ್ಲಿ ಪ್ರಸಿದ್ಧಿಸಲಾಗುವದು.
(i) ಸಂಯುಕ್ತ ಕರ್ನಾಟಕ, ಹುಬ್ಬಳ್ಳಿ.
(ii) ಕರ್ನಾಟಕಬಂಧು (ಗದಗ).
(iii) ಕರ್ಮವೀರ ಹುಬ್ಬಳ್ಳಿ.

ಕ) ಹುಬ್ಬಳ್ಳಿಯ ಸೀದಾ ಕ್ಷೇತ್ರಗಳಲ್ಲಿಯ ರೆವ್ಹಿನ್ಯೂ ಕಚೇರಿಯಲ್ಲಿಯ ಅಥವಾ ಇತರ ಸರಕಾರೀ ಕಚೇರಿಯಲ್ಲಿಯ ಇವುಗಳ ಸಲುವಾಗಿ ಕಾದಿಟ್ಟ ನೋಟೀಸು ಬೋರ್ಡುಗಳಿಗೆ ಈ ಆಜ್ಞೆಯ ಪ್ರತಿಗಳನ್ನು ಅಂಟಿಸಲಾಗುವದು.

ಡ) ಈ ಪ್ರಕಟನೆಯಲ್ಲಿಯ ಹೇಳಿಕೆಗಳನ್ನು ಸಾರಾಂಶದಲ್ಲಿ ಸ್ಪಷ್ಟೀಕರಿಸುವ ಪತ್ರಿಕಾ ಪ್ರಕಟನೆಯನ್ನು ಹೊರಡಿಸಲಾಗುವದು.

ಮುಂಬಯಿ ಗವ್ಹರ್ನರರ ಅಪ್ಪಣೆಯ ಮೇರೆಗೆ
**ಡಿ. ಎಸ್. ಬಖಲೆ**
ಸರಕಾರದ ಕಾರ್ಯದರ್ಶಿ

### ಪತ್ರಿಕಾ - ಪ್ರಕಟನೆ

ಮುಂಬಯಿ ಸರಕಾರದವರು ೨೧ ನೇ ಫೆಬ್ರುವರಿ ೧೯೪೬ ರಿಂದ ಮುಂದೆ ೧೯೪೪ ನೇ ಹುಬ್ಬಳ್ಳಿ ಸೀದಾ ನಿಯಂತ್ರಣಾಜ್ಞೆಯನ್ನು ತಿದ್ದುಪಡಿಯನ್ನು ಮಾಡಿದ್ದು, ಈ ತಿದ್ದುಪಡಿಯಿಂದ ಸೀದಾ ಕಾರ್ಡುಗಳಲ್ಲಿಯ ಮತ್ತು ಅಂಗಡಿಗಳಿಗೆ ಕೊಟ್ಟ ಸೀದಾ ಪರ್ಮಿಟುಗಳಲ್ಲಿಯ ಆಹಾರ ಧಾನ್ಯಗಳ ಒಂದು ಯುನಿಟ್ಟಿಗೆ ದೊರೆಯುವ ಪ್ರಮಾಣವನ್ನು ೧. ೩/೮ ಸೇರುಗಳಿಗೆ ಇಳಿಸಿರುತ್ತಾರೆ.

ಪಾರಿಶ್ರಮಿಕ ಕೆಲಸಗಾರರ ಪುರವಣಿ ಸೀದಾ ಪ್ರಮಾಣವನ್ನು ಸಹ ಪ್ರತಿವಾರಕ್ಕೆ ೧ ಸೇರಿಗೆ ಇಳಿಸಲಾಗಿದೆಯೆಂದು ಮುಂಬಯಿ ಸರಕಾರದವರು ಹೊರಡಿಸಿದ ಪತ್ರಿಕಾ ಪ್ರಕಟನೆಯು ಸೂಚಿಸುತ್ತದೆ.



# ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಕರ ಚಳವಳಿ

## ಸಂಪಿಗಾಗಿ ಸಿದ್ಧತೆ

ತಮ್ಮ ಪಗಾರ ಹೆಚ್ಚಳದ ಸಂಬಂಧದಲ್ಲಿ ಮುಂಬಯಿ ಪ್ರಾಂತದ ೪೫ ಸಾವಿರ ಪ್ರಾಥಮಿಕ ಶಿಕ್ಷಕರು ಮಾರ್ಚ ೧ ನೆಯ ತಾರೀಕಿನಿಂದ ಸಂಪು ಹೂಡಲು ನಿರ್ಧರಿಸಿರುವರಷ್ಟೆ. ಪ್ರಾಂತೀಯ ಸಮಿತಿಯ ನಿರ್ದೇಶದ ಮೇಲೆ ಮುಂಬಯಿ ಕರ್ನಾಟಕದ ಮೂಲೆ ಮೂಲೆಗಳಲ್ಲಿಯೂ ಪ್ರಾಥಮಿಕ ಶಿಕ್ಷಕರು ಫೆಬ್ರುವರಿ ೨೦ ಕ್ಕೆ ಶಿಕ್ಷಕರ ದಿನವನ್ನಾಚರಿಸಿದರು. ಅಂದು ಒಬ್ಬ ಶಿಕ್ಷಕನೂ ಶಾಲೆಗೆ ಹೋಗಲಿಲ್ಲ. ಪ್ರತಿಯೊಂದು ಕಡೆಯಲ್ಲಿಯೂ ಶಿಕ್ಷಕರು ಪ್ರಚಂಡ ಮೆರವಣಿಗೆಗಳನ್ನು ಮುಂಜಾನೆ ಹೊರಡಿಸಿದ್ದರು. ಸಂಜೆ ಸಾರ್ವಜನಿಕ ಸಭೆಗಳು ಕೂಡಿ ಶಿಕ್ಷಕರ ಬೇಡಿಕೆಗಳು ಸಮರ್ಥಿಸಲ್ಪಟ್ಟವು. ಬೇಡಿಕೆಗಳು ಪೂರ್ಣವಾಗದಿದ್ದರೆ ಮಾರ್ಚ ೧ ಕ್ಕೆ ಸಂಪು ಹೂಡಬೇಕೆಂಬ ನಿರ್ಣಯವು ಅಂದು ಪುನರುಚ್ಚರಿಸಲ್ಪಟ್ಟಿತು. ಶಿಕ್ಷಕ ಸಹಾಯ ನಿಧಿಯ ಸಂಗ್ರಹವೂ ನಡೆಯಿತು.

ಶಿಕ್ಷಕರ ದಿನಾಚರಣೆಯ ಸಂಬಂಧವಲ್ಲಿ ಹುಬ್ಬಳ್ಳಿಯಲ್ಲಿ ಕರ್ನಾಟಕ ಪ್ರಾಂತೀಯ ಪ್ರಾಥಮಿಕ ಶಿಕ್ಷಕರ ಸಂಘದ ಅಧ್ಯಕ್ಷರಾದ ಶ್ರೀ ದಿವಾಕರರ ಹಾಗು ಧಾರವಾಡದಲ್ಲಿ ಶ್ರೀ ಮುದವೀಡು ಕೃಷ್ಣರಾಯರ ಅಧ್ಯಕ್ಷತೆಯಲ್ಲಿ ಸಾರ್ವಜನಿಕ ಸಭೆಗಳು ಕೂಡಿದ್ದವು. ಪ್ರಾಥಮಿಕ ಶಿಕ್ಷಕರ ಬೇಡಿಕೆಗಳ ಬಗ್ಗೆ ನಾಗರಿಕರ ಸಂಪೂರ್ಣ ಸಹಾನುಭೂತಿಯಿದೆಯೆಂದೂ ಅವರ ಧ್ಯೇಯ ಸಾಧಿಸಲು ಅವಶ್ಯ ಸಹಾಯ ನೀಡಲು ನಾಗರಿಕರು ಸಿದ್ಧರಿರುವರೆಂದೂ ಜಾಹೀರಪಡಿಸುವ ಶ್ರೀ ದೇಶಪೂರರ ಗೊತ್ತುವಳಿಯು ಹುಬ್ಬಳ್ಳಿ ಸಭೆಯಲ್ಲಿ ಸರ್ವಾನುಮತದಿಂದ ಪಾಸಾಯಿತು.

ಬೆಳಗಾವಿ ಜಿಲ್ಲಾ ಸ್ಕೂಲ ಬೋರ್ಡದವರು ಪ್ರಾಥಮಿಕ ಶಿಕ್ಷಕರಿಗೆ ಕೊಡುತ್ತಿರುವ ಸಂಬಳ ಪ್ರಮಾಣವು ಬಹಳ ಕಡಿಮೆಯಿರುವದರಿಂದ ಸರಕಾರದವರು ಕೂಡಲೆ ಶಿಕ್ಷಕರ ಬೇಡಿಕೆಗಳನ್ನು ಪೂರೈಸಿ ಸಂಪನ್ನು ತಪ್ಪಿಸಬೇಕೆಂದು ಸರಕಾರಕ್ಕೆ ಬಿನ್ನವಿಸಿದ್ದಾರೆ.

### ಧಾರವಾಡ ಜಿಲ್ಲಾ ಸಂಘದ ನಿರ್ಣಯಗಳು

ತಾ. ೨೪ ಕ್ಕೆ ಹುಬ್ಬಳ್ಳಿಯಲ್ಲಿ ಶ್ರೀ ವಿ. ಕೆ. ಗೋಖಲೆಯವರ ಹಿರಿತನದಲ್ಲಿ ಧಾರವಾಡ ಜಿ. ಪ್ರಾ. ಶಿ. ವಿಶೇಷ ಸಭೆಯು ಕೂಡಿ ಮಾರ್ಚ ೧ ರಿಂದ ಶಾಲೆಗಳಿಗೆ ಬಹಿಷ್ಕಾರ ಹಾಕಬೇಕು. ಪ್ರಾಂತೀಯ ಚುನಾವಣೆಗಳಲ್ಲಿ ಶಿಕ್ಷಕರು ಪೋಲಿಂಗ ಇಲ್ಲವೆ ಪ್ರಿಸಾಯಿಡಿಂಗ ಆಫೀಸರರಾಗಿ ಕೆಲಸ ಮಾಡತಕ್ಕದ್ದಲ್ಲ. ಅಣ್ಣಿಗೇರಿಯಲ್ಲಿರುವ ಕಾರ್ಯಾಲಯವನ್ನು ಹುಬ್ಬಳ್ಳಿಗೆ ವರ್ಗಾಯಿಸಬೇಕು. ಶ್ರೀ ಹಿರೇಗೌಡರು ಇದರ ಮೇಲ್ವಿಚಾರಣೆ ನಡಿಸಬೇಕು. ಪ್ರತಿಯೊಂದು ತಾಲೂಕಿನಲ್ಲಿ ಪ್ರಚಾರಕ ಮಂಡಳ, ಪೋಷಕಮಂಡಳ, ನಿಧಿಸಂಗ್ರಹ ಮಂಡಳಗಳನ್ನು ರಚಿಸಬೇಕು, ಶಿಕ್ಷಕರ ಚಟುವಟಿಕೆಗಳು ಶಿಸ್ತಿನಿಂದ ಶಾಂತವಿರಬೇಕು ಮತ್ತು ಅವರು ಶಾಂತರೀತಿಯಿಂದ ಕೆಲಸ ಸಾಗಿಸಬೇಕು. ಎಂಬ ನಿರ್ಣಯಗಳು ಒಮ್ಮತದಿಂದ ಸ್ವೀಕೃತವಾದವು. ಸಂಘದ ಪ್ರತಿಜ್ಞೆಯನ್ನು ಓದಿ ನೆನಪು ಕೊಡಲಾಯಿತು.

ತಾ|| ೨೬ ರಂದು ಹುಬ್ಬಳ್ಳಿ ಧಾರವಾಡಗಳಲ್ಲಿ ಪುನಃ ಶಿಕ್ಷಕರ ಸಭೆ ಕೂಡಿತ್ತು. ಹುಬ್ಬಳ್ಳಿಯಲ್ಲಿ ಶ್ರೀ ದಿವಾಕರರು ಶಿಕ್ಷಕರನ್ನುದ್ದೇಶಿಸಿ ನಾಲ್ಕು ಉಪದೇಶಪರ ಮಾತುಗಳನ್ನಾಡಿ ಶಿಸ್ತಿನಿಂದಲೂ ಸಂಘಟನೆಯಿಂದಲೂ, ಒಕ್ಕಟ್ಟಿನಿಂದಲೂ ಮನೋಧೈರ್ಯದಿಂದಲೂ ಸಂಪಿನ ವೇಳೆಯಲ್ಲಿ ನಡೆದುಕೊಂಡಿದ್ದಾದರೆ ಅವರಿಗೆ ಯಶಸ್ಸು ಕಟ್ಟಿಟ್ಟದ್ದೆಂದರು. ಅಧಿಕಾರಿಗಳ ಕುಟಿಲ ನೀತಿಗಳಿಗೆ ಮನಸೋತು ಕಾರ್ಯವಿಮುಖರಾಗಬಾರದೆಂದೂ ಎಚ್ಚರಿಸಿದರು.

ಧಾರವಾಡದಲ್ಲಿ ನಗರಸಭೆಯ ಆಟ್ಟದ ಮೇಲೆ ಕೂಡಿದ ಸಭೆಗೆ ಶ್ರೀ ಹುಕ್ಕೇರಿಕರರು ಅಧ್ಯಕ್ಷರಾಗಿದ್ದರು. ಮಹಾರಾಷ್ಟ್ರದ ಮುಂದಾಳುಗಳಾದ ಶ್ರೀ ವ್ಹಿ. ಡಿ. ಚಿತಳೆಯವರು ಮುಖ್ಯ ಭಾಷಣಕಾರರಾಗಿದ್ದರು.

ಹುಬ್ಬಳ್ಳಿ ತಾಲೂಕಿನ ಶರೇವಾಡ [illegible] ವರು ಅಲ್ಲಿಯ ಪ್ರಾಥಮಿಕ ಶಿಕ್ಷಕರ ಸಂಪು [illegible] ಯುವ ವರೆಗೆ ಹೊಟ್ಟೆಯ ಖರ್ಚನ್ನು ಕೊಡುವದಾಗಿ ಆಶ್ವಾಸನವಿತ್ತಿದ್ದಾರೆ.

### ಅಧ್ಯಕ್ಷ ದೊಂದೆಯವರ ಸೂಚನೆಗಳು

ಮುಂಬಯಿ ಪ್ರಾಂತದ ಪ್ರಾಥಮಿಕ ಶಿಕ್ಷಕ ಸಂಘದ ಅಧ್ಯಕ್ಷರಾದ ಶ್ರೀ ಮೊ. ವಾ. ದೊಂದೆಯವರು ಕೆಳಗಿನ ಪ್ರಪಟನೆಯನ್ನು ಹೊರಡಿಸಿದ್ದಾರೆ.

೧ ಸಂಪಿನ ಸಮಯದಲ್ಲಿ ಶಾಲೆಯ ಮುಖ್ಯ ಶಿಕ್ಷಕ-ಶಿಕ್ಷಕಿಯರು ಶಾಲೆಯ ಕೀಲಿಕೈಯನ್ನು ತಮ್ಮ ಹತ್ತರ ಇಟ್ಟುಕೊಳ್ಳತಕ್ಕದ್ದು. ಆದರೆ ಕೀಲಿಕೈಯ ಬಗ್ಗೆ ಆಫೀಸಿನಿಂದ ಅಪ್ಪಣೆಯು ಬಂದರೆ ಅದರಂತೆ ವ್ಯವಸ್ಥೆ ಮಾಡತಕ್ಕದ್ದು. ೨ ಶಾಲೆಯ ಒಳಗೆ ಇಲ್ಲವೆ ಹೊರಗೆ ಶಿಕ್ಷಕರ ಸಂಬಂಧದೃಷ್ಟಿಯಿಂದ ಯಾವ ಯಾವ ಕೆಲಸಗಳನ್ನು ಮಾಡಬೇಕಾಗುವದೋ ಆ ಎಲ್ಲ ಕೆಲಸಗಳನ್ನು ಸಂಪಿನ ಸಮಯದಲ್ಲಿ ಮಾಡತಕ್ಕದ್ದಲ್ಲ. ೩ ತಾಲೂಕ ಶಾಲಾ ಮಾಸ್ತರರು ಬೋರ್ಡಿಂಗಿನ ಕೆಲಸ ಮಾಡ[illegible] ತಕ್ಕಂಥ ಶಿಕ್ಷಕರು ತಮ್ಮ ಕೆಲಸವನ್ನು ಮಾಡ[illegible]ರದು. ತಾಲೂಕಾ ಮಾಸ್ತರರು ಶಿಲ್ಕು ಇದ್ದ ಹಣವನ್ನು ಕೂಡಲೆ ಭರಣಾ ಮಾಡತಕ್ಕದ್ದು. ೪ ಶಾಲೆಯ ಟಪಾಲನ್ನು ತಕ್ಕೊಳ್ಳಕೂಡದು. ೫ ತಾ. ೨೪-೨-೪೬ ನೆಯ ದಿವಸದ ಜಿಲ್ಲಾ ಸಭೆಯ ವರದಿಯನ್ನು ಸರಕಾರಕ್ಕೂ ವರ್ತಮಾನಪತ್ರಕ್ಕೂ ಇಲಾಖಾ ಸಂಘದ ಕಾರ್ಯಾಲಯಕ್ಕೂ ಕಳಿಸತಕ್ಕದ್ದು. ೬ ಪ್ರಮಾಣಪತ್ರ ಪರೀಕ್ಷೆಯಲ್ಲಿ ಯಾವ ತರಹದ ಸಹಕಾರವನ್ನೂ ಮಾಡಕೂಡದು. ೭ ಸಂಪಿನ ಸಮಯದಲ್ಲಿ ಉಪಜೀವನದ ಸಲುವಾಗಿ

೧೧ನೇ ಪುಟಕ್ಕೆ

### ನಾರದ ಕತೆ

(೨ನೆಯ ಪುಟದಿಂದ ಮುಂದರಿದುದು)

"ನೀನು ಸ್ವಪ್ನದಲ್ಲಿ ಯಾರನ್ನು ಕಂಡೆಯೆಂಬುದನ್ನು ನಿಜವಾಗಿ ಹೇಳು."

"ಛೆ! ಅದು ನನ್ನಿಂದ ಆಗದ ವಿಷಯ." ಆಕೆ ಕೈಗಳನ್ನ ಜೋಡಿಸಿ ವಿನಂತಿಸಿದಳು.

"ನೀನು ಹೇಳಲೇ ಬೇಕು!" ಆ ವಾಕ್ಯದಲ್ಲಿ ದೃಢತೆ ತುಂಬಿತ್ತು.

"ಹೇಳದೆ ಗತ್ಯಂತರವಿಲ್ಲವೆ?" ಅವಳು ಮನವಿ ಮಾಡಿದಳು.

"ಇಲ್ಲ!" ಅವನು ಹೇಳಿದ.

"ಅವರೆ....ಆದರೆ ನಾನು....ತಮ್ಮನ್ನೇ ಕಂಡೆ ಮಹಾಸ್ವಾಮಿನ್!...." ಅವಳು ಶಿಲಾಹಂತದ ಮೇಲೆ ಧೊಪ್ಪನೆ ಬಿದ್ದಳು ಮತ್ತು ಅಳತೊಡಗಿದಳು.

ಆಕೆ ದುಃಖದ ಆವೇಗದಲ್ಲಿ ಮುಳುಗಿರುವಾಗಲೇ ಸನ್ಯಾಸಿ ಹೇಳತೊಡಗಿದ- "ನಾನು ಈ ರಾತ್ರಿ ಈ ಊರನ್ನು ಬಿಡುವ ನಿಶ್ಚಯ ಮಾಡಿದ್ದೇನೆ- ನಿನ್ನ ಮನಸ್ಸು ಇನ್ನು ಮುಂದೆ ನನ್ನ ಮೇಲೆ ಬೀಳಬಾರದೆಂದು. ನಾನು ಒಬ್ಬ ಸನ್ಯಾಸಿಯಿದ್ದೇನೆ. ಇದು ತಿಳಿದಿರಲಿ. ಇದರಲ್ಲಿ ಏನೂ ಗುಟ್ಟಿಲ್ಲ. ನೀನು ನನ್ನನ್ನು ಮರೆತು ಬಿಡಬೇಕು!"

"ಅಪ್ಪಣೆ ಮಹಾಸ್ವಾಮಿನ್! ಇದು ತಮ್ಮ ಆಜ್ಞೆ!" ಶೂನ್ಯ ದೃಷ್ಟಿಯಿಂದೊಮ್ಮೆ ಕುಸುಮಳು ಸನ್ಯಾಸಿಯನ್ನು ದಿಟ್ಟಿಸಿದಳು.

"ಒಳ್ಳೇದು, ನಾನು ಬರುತ್ತೇನೆ" ಸನ್ಯಾಸಿಯೆಂದ.

ಅವನು ಅದೃಶ್ಯನಾಗುವ ವರೆಗೆ ಕುಸುಮಳು ಆ ದಿಕ್ಕನ್ನು ನೋಡುತ್ತಾ ಕುಳಿತಳು. ಅವನ ಪಾದಧೂಳಿಯನ್ನು ಹಣೆಗೆ ಹಚ್ಚಿಕೊಂಡು ಆಕೆ ಒಂದು ದೀರ್ಘ ಶ್ವಾಸ ಕರೆದಳು.

—ಚಂದ್ರನು ಅಸ್ತಮವಾದ. ರಜನಿಯು ಘೋರ ಅಂಧಕಾರಮಯವಾದಳು. ಪವಿತ್ರ ಗಂಗಾ ನದಿಯ ಜಲರಾಶಿಯಲ್ಲಿ "ಸ....ಳ್....ಬ್ಬು....ಧ....ಂ...." ಎಂಬ ಶಬ್ದವೊಂದು ಕೇಳಿಸಿತು. ನಿಬಿಡ ಅಂಧಕಾರದಲ್ಲಿ ಗಾಳಿಯು ಎಡೆಬಿಡದೆ ಬೀಸುತ್ತಿದ್ದಿತು. ಆಕಾಶಮಂಡಲದ ವರೆಗೂ ಏರಿ ಹೋಗುವ ಇಚ್ಛೆ ವಾಯುದೇವನಿಗೆ ಆಗಿರಬಹುದು. ಭಾಗೀರಥಿಯು ಬಾನುಬಾಯಾಗಿ ಭೋರ್ಗರೆಯುತ್ತ ಸಾಗುತ್ತಿದ್ದಳು.

ಕರ್ಮವೀರ

# ಹರಿಜನ ಪುರವಣಿ

## ಟೀಕೆ ಟಿಪ್ಪಣಿಗಳು

### ಬಲುಮೆಯ ಉಪವಾಸ

ರಾಜಾಜಿಯವರ ಬಗ್ಗೆ ನಾನು ವ್ಯಕ್ತಪಡಿಸಿರುವ ಅಭಿಪ್ರಾಯವನ್ನು ನಿಷೇಧಿಸಿ ಪತ್ರಗಳೂ ತಂತಿಗಳೂ ಬಂದಿವೆ. ರಾಜಾಜಿಯವರು ನನ್ನ ಹೊಗಳಿಕೆಗೆಲ್ಲ ಯೋಗ್ಯರೆಂದು ಅವುಗಳಲ್ಲಿ ಕೆಲವು ಹೇಳುತ್ತವೆ. ರಾಜಾಜಿಯ ಪ್ರಾಮಾಣಿಕತೆ, ಸ್ವಾರ್ಥತ್ಯಾಗ, ಮಹಾ ಯೋಗ್ಯತೆ, ಸಮರ್ಥ ಆಡಳಿತೆ ಇವನ್ನೆಲ್ಲ ಅವರು ಒಪ್ಪುತ್ತಾರೆ. ಆದರೆ ಗೀಳತಿ ರಲ್ಲಿಯ ಅವರ ಪಕ್ಷತ್ಯಾಗವು ಅಕ್ಷಮ್ಯ. ಅವರು ಮದ್ರಾಸದ ಮುಖ್ಯ ಮಂತ್ರಿಗಳಾಗುವ ಹಂಚಿಕೆ ನಡೆಸಿದ್ದಾರೆಂದು ಹೇಳುತ್ತಾರೆ. ಕಾಂಗ್ರೆಸಿಗೆ ರಾಜೀನಾಮೆ ಕೊಟ್ಟು ತಮ್ಮ ಅಭಿಪ್ರಾಯಗಳಿಗೆ ಅಂಟಕೊಳ್ಳುವದರಲ್ಲಿ ನನಗೇನೂ ಅಪರಾಧ ಅಥವಾ ಪಕ್ಷತ್ಯಾಗ ಕಾಣಿಸುವದಿಲ್ಲ. ಅವರು ಮುಖ್ಯ ಮಂತ್ರಿ ಪದಕ್ಕೆ ಹೊಂಚುಹಾಕಿದರೆ ಅದು ನಿಜವಾಗಿಯೂ ನಿಂದ್ಯವಾದುದು ಮತ್ತು ನನಗಿದೊಂದು ಹೊಸ ವಿಷಾದಕರ ಶೋಧವಾದಂತಾಗುವದು.

ಅವರ ರಕ್ಷಣೆಗಾಗಿ ನಾನು ಈ ವಿಷಯವನ್ನು ಪುನಃ ಎತ್ತಿಕೊಂಡಿಲ್ಲ. ನನ್ನ ಅಭಿಪ್ರಾಯಕ್ಕೆ ನೈತಿಕ ಬಲದ ಹೊರತು ಬೇರೆ ಯಾವ ಬಲವಿಲ್ಲ ಬೇಕಾದರೆ ನೀವಿದನ್ನು ಕಡೆಗಣಿಸಬಹುದು. ರಾಜಾಜಿಯವರನ್ನು ವಿರೋಧಿಸುವವರ ಬಗ್ಗೆ ನಾನು 'ಗುಂಪು' ಎಂಬ ಶಬ್ದವನ್ನು ಉಪಯೋಗಿಸಿದ್ದೆನ್ನು ಹಿಂತೆಗೆದುಕೊಳ್ಳಲಿಲ್ಲವಾದರೆ ಉಪವಾಸ ಹೂಡುವೆವು ಎಂದು ತೋರಿಸಿದ ಹೆದರಿಕೆಯನ್ನು ಅಥವಾ ಆ ಉಪವಾಸವನ್ನೇ ನಿಷೇಧಿಸುವದಕ್ಕಾಗಿಯೆ ಈಗ ಬರೆಯುತಿದ್ದೇನೆ. ಆ ಶಬ್ದದ ಅರ್ಥವನ್ನು ನಾನು ವಿವರಿಸಿದ್ದೇನೆ. ಆ ಅರ್ಥದಂತೆ ನಾನು ಆ ಶಬ್ದವನ್ನು ಉಪಯೋಗಿಸುತ್ತೇನೆ. ತಮ್ಮ ನಂಬಿಕೆಯನ್ನು ಬದಲಿಸಲು ಯಾರಿಗೂ ಒತ್ತಾಯ ಮಾಡಬಾರದು. ದ್ವೇ ಪ್ರಸಂಗ ಉಪವಾಸಗಳು ಫಲಿಸಿದರೆ ಎಲ್ಲ ವಿಚಾರಕ್ಕೂ ಸತ್ಯಕ್ಕೂ ತಿಲಾಂಜಲಿ ಎರೆದಂತೆಯೆ ಆಗುವದು. ಇಡೀ ಜಗತ್ತೇ ನನ್ನ ವಿರುದ್ಧ ಉಪವಾಸ ಕೈಕೊಂಡರೂ ಸತ್ಯಾಗ್ರಹ ತಂತ್ರದಲ್ಲಿ ಉಪವಾಸಾಸ್ತ್ರದ ಸಂಶೋಧಕನಾದ ನಾನು ನನ್ನ ಪ್ರಾಮಾಣಿಕ ಮತವನ್ನು ಬದಲಿಸಲಾರೆನು. ಕೆಲವು ನಾಸ್ತಿಕರು ದೇವರಿಲ್ಲವೆಂದು ಉಪವಾಸ ಹೂಡಿದರೆ ನಾನು ಆ ನಂಬಿಕೆಯನ್ನೂ ಬಿಟ್ಟುಕೊಡಬೇಕಾದೀತು. ನಾನು ಹೇಳಿದ ನೀತಿಯ ನಿಯಮವು ಇಡೀ ವಿಶ್ವಕ್ಕೆ ಅನ್ವಯಿಸುವದು. ಅವರ ಕಾರಣಗಳು ಪ್ರಬಲವಾಗಿರಬಹುದಾದರೂ ಈಗ ಯುಕ್ತಪ್ರಾಂತದ ಜೇಲುಗಳಲ್ಲಿ ಚುನಾವಣಿ ಮಂಡಳದ ನಿರ್ಣಯಗಳನ್ನು ಮನ್ನಿಸದೆ ಹೂಡಿದ ಉಪವಾಸಗಳೆಲ್ಲ ಇದೇ ಜಾತಿಯವೆಂದು ಇಲ್ಲಿ ಹೇಳಬಹುದು.

ಪುಣೆ — ಮೋ. ಕ. ಗಾಂಧಿ

೨೨-೨-೪೬

### ಎರಡು ಬಿನ್ನಹಗಳು

ನಾನು ನನ್ನ ಆತ್ಮಚರಿತ್ರೆಯನ್ನು ಈಗ ಬಿಟ್ಟಲ್ಲಿಂದ ಪುನಃ ಬರೆಯಬೇಕೆಂದೂ ಅಹಿಂಸೆಯ ತಂತ್ರದ ಬಗ್ಗೆ ಒಂದು ಗ್ರಂಥ ಬರೆಯಬೇಕೆಂದೂ ಒಬ್ಬ ಮಿತ್ರರು ನನಗೆ ಬಿನ್ನವಿಸಿಕೊಂಡಿದ್ದಾರೆ.

ನಿಜವಾಗಿಯೂ ನಾನು ಆತ್ಮಚರಿತ್ರೆಯನ್ನು ಎಂದಿಗೂ ಬರೆದಿಲ್ಲ. ನಾನು ನನ್ನ ಸತ್ಯಶೋಧನೆಯ ಪ್ರಯೋಗಗಳನ್ನು ಒಂದೊಂದಾಗಿ ಲೇಖರೂಪದಲ್ಲಿ ಬರೆಯುತ್ತ ಬಂದೆ. ಅವೇ ನಂತರ ಪುಸ್ತಕರೂಪದಲ್ಲಿ ಪ್ರಸಿದ್ಧವಾದವು. ಅಂದಿನಿಂದಈಗ ೩೫ ವರ್ಷಗಳು ಉರುಳಿವೆ. ಈ ಅವಧಿಯಲ್ಲಿಯ ನನ್ನ ಕೃತಿಗಳನ್ನಾಗಲಿ ವಿಚಾರಗಳನ್ನಾಗಲಿ ಕಾಲಾನುಕ್ರಮದಿಂದ ಬರೆದಿಡಲಾಗಿಲ್ಲ. ನಾನೂ ಹಾಗೆ ಮಾಡಲಿಚ್ಛಿಸುವೆ, ಆದರೆ ವಿರಾಮವೆಲ್ಲಿ? ಕೇವಲ ಕರ್ತವ್ಯಧರ್ಮವೆಂದು ಈ ಕಠಿನ ಕಾಲದಲ್ಲಿ ಹರಿಜನದ ಪ್ರಕಟನೆಯನ್ನು ಕೈಕೊಂಡಿರುವೆ. ಈ ಕೆಲಸವನ್ನು ಸಮರ್ಥ ರೀತಿಯಿಂದ ಸಾಗಿಸಿಕೊಂಡು ಹೋಗುವದೇ ಕಠಿಣವಾಗಿದೆ. ನನ್ನ ಸತ್ಯಶೋಧನೆಯ ಇತರ ಪ್ರಯೋಗಗಳನ್ನು ಅದ್ಯಾವತ್ತಾಗಿ ಬರೆಯುವದೆಂತು? ಆದರೆನಾನವನ್ನು ಬರೆಯಬೇಕೆಂದು ದೇವರ ಇಚ್ಛೆಯಿದ್ದರೆ ಅವನು ನನ್ನ ಮಾರ್ಗವನ್ನು ಸುಗಮವಾಗಿಸುವನು.

ಅಹಿಂಸೆಯ ತಂತ್ರದ ಬಗ್ಗೆ ಗ್ರಂಥ ಬರೆಯುವದು ನನ್ನನ್ನು ಮೀರಿದೆ. ವಿದ್ವತ್ಪೂರ್ಣ ಲೇಖನಗಳನ್ನು ನಾನು ಬರೆಯಲಾರೆ. ನನ್ನದು ಕೃತಿರಾಜ್ಯ. ನನ್ನ ವಿಚಾರದ ಪ್ರಕಾರ ನನ್ನ ಕರ್ತವ್ಯವೆನಿಸಿದ್ದನ್ನು, ನನ್ನ ರೀತಿಗೊಪ್ಪುವದನ್ನು ನಾನು ಮಾಡುವೆ. ನನ್ನ ಕೃತಿಗಳೆಲ್ಲ ಸೇವಾಬುದ್ಧಿಯಿಂದಲೆ ಪ್ರೇರಿತವಾದ ವಿರುತ್ತವೆ. ಅಹಿಂಸೆಗೆ ಶಾಸ್ತ್ರ ಸ್ವರೂಪವನ್ನು ಕೊಡಬೇಕೆನ್ನುವವನು, ಅದು ಅಂಥ ಭಾಷ್ಯಕ್ಕೆ ನಿಲುಕುವಂತಿದ್ದರೆ, ಹಾಗೆ ಮಾಡಲಿ. ಆ ಗೆಳೆಯರು ಈ ಕೆಲಸಕ್ಕಾಗಿ ನನಗೆ ತರತಮಭಾವದಿಂದ ಮೂರು ಹೆಸರುಗಳನ್ನು ಸೂಚಿಸಿದ್ದಾರೆ--ಶ್ರೀ ವಿನೋಬಾ ಶ್ರೀ ಕಿಶೋರಿಲಾಲ ಮಶ್ರುವಾಲಾ ಮತ್ತು ಶ್ರೀ ಕಾಕಾ ಸಾಹೇಬ. ಶ್ರೀ ವಿನೋಬಾ ಅವರು ಇದನ್ನು ಮಾಡಬಲ್ಲರೆಂದು ನನಗೆ ಗೊತ್ತು, ಆದರೆ ಅವರು ಮಾಡಲೊಲ್ಲರು. ಅವರ ಸಮಯದ ಪ್ರತಿ ತಾಸಿಗೂ ಕರ್ತವ್ಯದ ಯಾದಿಯುಂಟು. ಒಂದು ಕ್ಷಣವನ್ನಾದರೂ ಬರೆಯುವದಕ್ಕೆ ಉಪಯೋಗಿಸುವದು ದೊಡ್ಡ ಬಲಿದಾನವೆಂದು ಅವರು ಭಾವಿಸಿಯಾರು. ನನಗೂ ಹಾಗೇ ಎನಿಸುತ್ತದೆ ಜಗತ್ತಿಗೆ ಶಾಸ್ತ್ರಗಳ ತೃಷ್ಣೆಯಿಲ್ಲ ಜಗತ್ತು ಬಯಸಿದ್ದು, ಬಯಸುತ್ತಿರುವದು ಕಳಕಳಿಯ ಕೃತಿ. ಜಗತ್ತಿನ ಈ ಹಸಿವನ್ನು ಹಿಂಗಿಸುವವನು ಶಾಸ್ತ್ರಗಳ ವಿವರಣೆಯಲ್ಲಿ ತನ್ನ ಕಾಲ ಕಳೆಯುವದಿಲ್ಲ.

ಶ್ರೀ ಕಿಶೋರಲಾಲರು ಈ ಬಗ್ಗೆ ಈಗಾಗಲೆ ಒಂದು ಸ್ವತಂತ್ರ ಗ್ರಂಥ ಬರೆದಿದ್ದಾರೆ. ಅವರ ಆರೋಗ್ಯವು ಸರಿಯಾಗಿದ್ದರೆ ಅವರಿನ್ನೂ ಬರೆಯುವರೆಂದು ನನಗೆ ಗೊತ್ತಿದೆ. ಅವರ ಪುಸ್ತಕವನ್ನು ಶಾಸ್ತ್ರವೆಂದು ಕರೆಯುವದು ಸರಿಯಾಗಲಿಕ್ಕಿಲ್ಲ. ಆದರೆ ಅದು ಶಾಸ್ತ್ರಕ್ಕೆ ತೀರಸಮೀಪವಾಗಿದೆ ಎಂದು ಹೇಳಬಹುದು. ಅವರ ಸದ್ಯದ ಅನಾರೋಗ್ಯದ ಸ್ಥಿತಿಯಲ್ಲಿ ಅವರು ಈ ಗ್ರಂಥರಚನೆಯ ಭಾರವನ್ನು ಹೊರಬಲ್ಲರೆಂದು ನನಗೆನಿಸುವದಿಲ್ಲ. ನಾನದನ್ನು ಅವರ ಮೇಲೆ ಹೇರಲೂ ಬಯಸುವದಿಲ್ಲ. ಶ್ರೀ ವಿನೋಬಾ ಭಾವೆಯವರಂತೆ ಇವರಾದರೂ ಒಂದುಕ್ಷಣ ವ್ಯರ್ಥ ಕಳೆಯಲಿಚ್ಛಿಸುವದಿಲ್ಲ. ತಮ್ಮ ಮಿತ್ರರ ವೈಯಕ್ತಿಕ ಸಮಸ್ಯೆಗಳನ್ನು ನಿವಾರಿಸುವದಕ್ಕಾಗಿ ಸಲಹೆ ಕೊಡುವದರಲ್ಲಿ ಇವರ ಸಮಯ ಕಳೆದು ಹೋಗಿ ದಿನ ಮುಳುಗುವ ಹೊತ್ತಿಗೆ ದಣಿದು ಹೋಗಿರುತ್ತಾರೆ.

ಶ್ರೀ ಠಕ್ಕರರಂತೆ ಶ್ರೀ ಕಾಕಾ ಸಾಹೇಬರೂ ನಿರಂತರ ಸಂಚಾರಿಯಾಗಿರುತ್ತಾರೆ. ಕಾಕಾ ಸಾಹೇಬರು ಈಗ ರಾಷ್ಟ್ರಭಾಷೆ ಪ್ರಾಂತಭಾಷೆಗಳ ಬೆಳವಣಿಗೆ ಪ್ರಸಾರವನ್ನು ತಮ್ಮ ವಿಶಿಷ್ಟ ಕಾರ್ಯವಾಗಿ ಆಯ್ದುಕೊಂಡಿದ್ದಾರೆ. ಅವರೇನಾದರೂ ಶಾಸ್ತ್ರಗ್ರಂಥ ಬರೆಯುವದಕ್ಕಾಗಿ ಒಂದು ನಿಮಿಷ ಹಾಳುಮಾಡಿದರೆ ನಾನೇ ಅವರನ್ನು ತಡೆಯುವೆನು.

ಅಹಿಂಸಾ ಶಾಸ್ತ್ರದ ಗ್ರಂಥ ಬರೆಯುವದು ಈಗ ಏನೂ ಅವಶ್ಯವಿಲ್ಲವೆಂದು ಈ ಮೇಲಿನ ಸಂಗತಿಗಳಿಂದ ಕಂಡುಕೊಳ್ಳಬಹುದು. ನನ್ನ ಜೀವನಾವಧಿಯಲ್ಲಿ ಬರೆದ ಇಂಥ ಗ್ರಂಥ ಅಪೂರ್ಣವಾಗುವದು ಬರೆಯಲೆ ಬೇಕಾಗಿದ್ದರೆ ನನ್ನ ಮರಣದ ನಂತರ ಬರೆಯಬಹುದು. ಆಗ ಕೂಡ ಅದು ಅಹಿಂಸೆಯ ಸಂಪೂರ್ಣ ವಿವರಣೆಯನ್ನು ಕೊಡಲಾರದು ಎಂದು ನಾನು ಈಗಲೆ ಎಚ್ಚರಿಸುತ್ತೇನೆ. ದೇವರನ್ನು ಸಂಪೂರ್ಣವಾಗಿ ಬಣ್ಣಿಸಲು ಯಾರಿಗೂ ಸಾಧ್ಯವಿಲ್ಲ. ಅಹಿಂಸೆಯ ವರ್ಣನೆಯೂ ಸಾಧ್ಯವಿಲ್ಲ. ನಾನು ಇಂದು ನಿಜವೆಂದು ತಿಳಿದು ಆಚರಿಸಿದ್ದನ್ನೇ ನಾಳೆಗೂ ಆಚರಿಸುವೆನೆಂದು ನಾನು ಆಶ್ವಾಸನ ಕೊಡಲಾರೆ. ದೇವರೊಬ್ಬನೆ ಸರ್ವಜ್ಞ. ರಕ್ತಮಾಂಸಗಳ ಮುದ್ದೆಯಾದ ಮಾನವನು ಎಂದಿಗೂ ಅಪೂರ್ಣನೆ. ಮಾನವನು ದೇವರ ಪಡಿಯಚ್ಚು ಎಂದು ನಿರ್ಮಿತವಾಗಿದ್ದಾನೆಂದು ಹೇಳಬಹುದಾದರೂ ದೇವರಿಂದ ಬಹು ಅಂತರದಲ್ಲಿದ್ದಾನೆ. ದೇವರು ಮಾನವನ ಚರ್ಮಚಕ್ಷುವಿಗೆ ಅಗೋಚರನಾಗಿದ್ದಾನೆ. ಆದ್ದರಿಂದ ನಾವು ದೇವರ ದೂತರೆಂದು ಭಾವಿಸುವದರ ಕೃತಿಗಳನ್ನೂ ವಿಚಾರಗಳನ್ನೂ ಅರಿತುಕೊಳ್ಳಲು ಪ್ರಯತ್ನಿಸಬಲ್ಲೆವಷ್ಟೆ. ಅವು ನಮ್ಮಲ್ಲಿ ಇಳಿಯಲಿ. ಅವನ್ನು ನಮ್ಮ ಮನಸ್ಸಿಗೊಪ್ಪುವಷ್ಟನ್ನು, ಕೃತಿಗಿಳಿಸಲು ಪ್ರಯತ್ನಿಸೋಣ. ಶಾಸ್ತ್ರೀಯ ಗ್ರಂಥವು ಇದಕ್ಕಿಂತ ಹೆಚ್ಚಿಗೆ ಏನನ್ನು ಸಾಧಿಸಬಲ್ಲದು ?

ಪುಣೆ, — ಮೋ. ಕ. ಗಾಂ.

೨೫-೨-೪೬ (ಹರಿಜನ ಬಂಧು)

### ನಿಸರ್ಗ ಚಿಕಿತ್ಸೆ

ನಿಸರ್ಗ ಚಿಕಿತ್ಸೆಯೆಂದರೆ ಮನುಷ್ಯನಿಗೆ ಒಗ್ಗುವ ಚಿಕಿತ್ಸೆ. ಇಲ್ಲಿ ಮನುಷ್ಯನೆಂದರೆ ಕೇವಲ ಒಂದು ಪ್ರಾಣಿಯಲ್ಲ. ಅವನಿಗೆ ದೇಹದ ಹೊರತು ಮನಸ್ಸೂ ಆತ್ಮವೂ ಇದೆ. ಇಂಥ ಮಾನವ ಪ್ರಾಣಿಗೆ ರಾಮನಾಮವೊಂದೆ ತೀರ ನಿಜವಾದ ನಿಸರ್ಗ ಚಿಕಿತ್ಸೆ. ಅದು ರಾಮಬಾಣ ಉಪಾಯ. 'ರಾಮಬಾಣ' ವೆಂಬ ಶಬ್ದವೂ ಇದರಿಂದಲೆ ಬಂದಿದೆ. ಮಾನವನಿಗೆ ಯಾವ ರೋಗವೆ ಇರಲಿ, ಹೃದಯದಿಂದ ರಾಮನಾಮ ಜಪಿಸಿದರೆ ಆ ರೋಗಕ್ಕೆ ಅದೇ ನಿಜವಾದ ಮದ್ದು. ದೇವರಿಗೆ ಅನಂತ ನಾಮಗಳಿವೆ, ಪ್ರತಿಯೊಬ್ಬನು ತನಗೆ ಸೇರುವ ಹೆಸರನ್ನು ಆರಿಸಿಕೊಳ್ಳಬಹುದು. ಈಶ್ವರ,ಅಲ್ಲಾಹ, ಖುದಾ ಮತ್ತು ದೇವರು ಎಂದರೆ ಎಲ್ಲರೂ ಒಂದೇ. ಆದರೆ ಗಿಳಿಯಂತೆ ದೇವರ ನಾಮವನ್ನು ಜಪಿಸದೆ ಪ್ರಯತ್ನಪೂರ್ವಕ ಸಾಧಿಸಿದ ನಂಬಿಕೆಯ ಪ್ರಭಾವದಿಂದ ರಾಮನಾಮವನ್ನು ಜಪಿಸಬೇಕು. ಈ ಪ್ರಯತ್ನವೆಂಥದಿರಬೇಕು? ಪೃಥಿವಿ, ಅಪ್, ತೇಜ, ಆಕಾಶ ಮತ್ತು ವಾಯು ಈ ಪಂಚಮಹಾಭೂತಗಳಿಂದಾದ ದೇಹದ ಚಿಕಿತ್ಸೆಗಾದರೂ ಮಾನವನು ಸಂಶೋಧನೆಯಿಂದ ಅವಕ್ಕೇ ಮೊರೆಹೊಗಬೇಕು. ರಾಮನಾಮವು ಈ ಕಾರ್ಯದಲ್ಲಿ ಅಪರಿಹಾರ್ಯ ಸಂಗಡಿಗನಾಗಿದೆ. ಇಷ್ಟು ಮೀರಿ ಮರಣ ಬಂದರೆ ನಾವು ಲಕ್ಷಿಸಬಾರದು. ಆದರೆ ಅದನ್ನು ಸ್ವಾಗತಿಸಬೇಕು. ವಿಜ್ಞಾನವು ದೇಹವನ್ನು ಅಮರ ಮಾಡುವ ಯಾವ ವಿಧಾನವನ್ನು ಇದುವರೆಗೂ ಕಂಡುಹಿಡಿದಿಲ್ಲ ಆತ್ಮಕ್ಕೆ ಅಮರತ್ವವನ್ನು ಆರೋಪಿಸಲಾಗುತ್ತದೆ ಆತ್ಮವು ಅವಿನಾಶಿ. ಆದರೆ ಅದರ ಶುಚಿತ್ವವನ್ನು ವ್ಯಕ್ತಪಡಿಸುವದು ಮಾನವನ ಧರ್ಮವಾಗಿದೆ

ಈ ಮೇಲಿನ ತರ್ಕವನ್ನು ನಾವು ಒಪ್ಪಿಕೊಂಡರೆ ನಿಸರ್ಗಚಿಕಿತ್ಸೆಯ ಉಪಾಯಗಳಾವವು ಎಂಬುದು ತಾನೇ ನಿರ್ಧಾರವಾಗುತ್ತದೆ. ನಂತರ ದೊಡ್ಡ ದೊಡ್ಡ ಆಸ್ಪತ್ರೆಗಳು, ಪ್ರಸಿದ್ಧ ಡಾಕ್ಟರರು ಈ ಎಲ್ಲ ಸರಂಜಾಮು ಮಾನವನಿಗೆ ಅವಶ್ಯವಾಗುವದಿಲ್ಲ. ಈ ಜಗತ್ತಿನಲ್ಲಿ ಬಹು ಜನರಿಗೆ ಈ ಸರಂಜಾಮುದ ಸೌಕರ್ಯ ದೊರೆಯುವದಿಲ್ಲ. ಆದ್ದರಿಂದ ಅನೇಕರಿಗೆ ದೊರೆಯದಿದ್ದುದನ್ನು ಕೆಲವರೆ ಹಾರೆಸುವದಾದರೂ ಏಕೆ?

ಪುಣೆ — ಮೋ. ಕ. ಗಾಂಧಿ

೨೪—೨—೪೬

(ಹರಿಜನ ಸೇವಕ)

ಜೊತೆಗಾರರ ಮಧ್ಯದಲ್ಲಿದ್ದರೂ ಏಕಾಕಿಯಾಗಿದ್ದಂತೆ ತನಗೆ ಎನಿಸುವದೆಂದು ಓರ್ವ ಮಿತ್ರನು ಮೊನ್ನೆ ಬರೆದಿದ್ದನು. ಅಧಿಕಾರಿಗಳ ಮಾತಿನಲ್ಲಿ ವಿಶ್ವಾಸವಿಲ್ಲವೆಂದು ನಾನು ಹೇಳಿದ್ದರಿಂದ ಅವನ ಮುಖದಿಂದ ಈ ಮಾತುಗಳು ಹೊರಬಿದ್ದವು. ಅಧಿಕಾರಿಗಳ ಮಾತಿನಲ್ಲಿ ಅವನಿಗೆ ಅವಿಶ್ವಾಸವಿದ್ದಿಲ್ಲ. ತನ್ನಂತೆ ನನಗೂ ವಿಶ್ವಾಸವಿದ್ದಿರಬೇಕೆಂದು ಭಾವಿಸಿದ್ದನು. ಆದರೆ ನನ್ನ ಅವಿಶ್ವಾಸ ನೋಡಿ ಅವನಿಗಾದ ಆಶ್ಚರ್ಯ ನೋಡಿರಿ! ಅವನು ಬರೆದ ಚುಟುಕು ಪತ್ರದ ಅರ್ಥ ಹಾಗಿರಲಿಕ್ಕಿಲ್ಲ. ಆದರೆ ನಾನು ಮಾತ್ರ ಹಾಗೆ ಅರ್ಥ ಮಾಡಿಕೊಂಡು, ಆಸ್ತಿಕನಾದ ಅವನಿಗೆ ಏಕಾಕಿತೆಯ ಅನುಭವ ಆಗಬಾರದೆಂದು ಉತ್ತರ ಬರೆದೆ. ಯಾಕೆಂದರೆ ಪರಮಾತ್ಮನು ಯಾವಾಗಲೂ ಅವನ ಜೊತೆಯಲ್ಲಿರುತ್ತಾನೆ. ಆದುದರಿಂದ ಇಡೀ ಜಗತ್ತು ಅವನ ಕೈಬಿಟ್ಟರೂ ತಾನು ಏಕಾಕಿಯೆಂದು ಏಕೆ ತಿಳಿದುಕೊಳ್ಳಬೇಕು? ನಾನು ಒಪ್ಪದಿದ್ದರೂ ಅವನ ಹೃದಯ-ತಲೆಯಲ್ಲ-ಒಪ್ಪುವವರೆಗೆ ಅವನು ಬೇಕಾದಷ್ಟು ವಿಶ್ವಾಸ ಇಡಲಿ.

ನನ್ನ ಅಭಿಪ್ರಾಯವೇ ಬೇರೆ. ಪರಸ್ಪರ ವಿಶ್ವಾಸ ಮತ್ತು ಪ್ರೇಮ ನಿಜವಾದವುಗಳಲ್ಲ. ನಮ್ಮ ದ್ವೇಷಿಕರನ್ನು ಪ್ರೀತಿಸುವದೇ ನಿಜವಾದ ಪ್ರೇಮ; ನಿಮ್ಮ ನೆರೆಯವನಲ್ಲಿ ವಿಶ್ವಾಸವಿರದಿದ್ದರೂ ಅವನನ್ನು ಪ್ರೀತಿಸುವದು ಸತ್ಯವಾದ ಪ್ರೇಮ. ಇಂಗ್ಲೀಷ ಅಧಿಕಾರಿಗಳಲ್ಲಿ ಅವಿಶ್ವಾಸ ತೋರುವದಕ್ಕೆ ನನ್ನಲ್ಲಿ ಬಲವಾದ ಕಾರಣಗಳಿರುತ್ತವೆ. ಆದರೆ ನನ್ನ ಪ್ರೇಮವು ಸತ್ಯವಾಗಿದ್ದರೆ ಇಂಗ್ಲೀಷ ಮನುಷ್ಯನನ್ನು, ಅವನು ನನ್ನ ಅವಿಶ್ವಾಸಕ್ಕೆ ಪಾತ್ರನಾಗಿದ್ದರೂ ಪ್ರೀತಿಸಬೇಕು. ವಿಶ್ವಾಸವಿರುವವರೆಗೆ ಮಾತ್ರ ಪ್ರೇಮ ಉಳಿದರೆ ಅದರ ಉಪಯೋಗವೇನು? ಕಳ್ಳರು ಸಹ ಆ ರೀತಿ ಪ್ರೀತಿಸುತ್ತಾರೆ. ವಿಶ್ವಾಸ ಹಾರಿದಾಗ ಅವರು ಶತ್ರುಗಳಾಗುವರು.

ಮುಂಬೈಯಲ್ಲಿ-ನಾನು ಬಹುವಾಗಿ ಕಾಲಕಳೆದ, ಸಾರ್ವಜನಿಕ ಸೇವೆಗೆ ಅಪರಿಮಿತ ಹಣ ಸುರಿದ ಹಾಗೂ ಅಹಿಂಸೆಯನ್ನು ಸಾಮಾನ್ಯವಾಗಿ ಮೈಗೂಡಿಸಿಕೊಂಡಿದೆಯೆಂದು ನಾನು ನಂಬಿದ ಮುಂಬೈಯಲ್ಲಿ-ಈಗ ಏನು ನಡಿದಿದೆಯೆಂಬುದನ್ನು ನೋಡಿರಿ. ಅದು ಅಹಿಂಸೆಯ ಸಮಾಧಿಸ್ಥಾನವಾಗುವದೋ?

ಆ ನಗರದಲ್ಲಿ ಇತ್ತೀಚೆಗೆ ನಡೆದ ಕಿಚ್ಚಿಡುವ, ಲೂಟಿ ಮಾಡುವ ಮತ್ತು ಇಂಗ್ಲಿಷರನ್ನು ಅವಮಾನಗೊಳಿಸುವ ಕೃತಿಗಳು ಪುಂಡರವೆಂದು ನಾನು ನಂಬಲಾರೆ. ಈ ಪುಂಡರು ಯಾರು ? ಇಂಗ್ಲೀಷರ ಆಳಿಕೆ ಮುಗಿದ ನಂತರ ಈ ಗುಂಡರು ಅಡಗುವರೇನು ? ಆದುದರಿಂದ ಪುಂಡರನ್ನು ಹಳಿಯುವದನ್ನು ಬಿಟ್ಟುಬಿಡಬೇಕು. ಅವರನ್ನು ಸೃಷ್ಟಿಸುವವರು ನಾವೇ. ಸುತ್ತಲಿನ ವಾತಾವರಣದಂತೆ ಅವರು ವರ್ತಿಸುತ್ತಿರುತ್ತಾರೆ.

ಕಾಳಿನ ಅಂಗಡಿಗಳನ್ನು ಲೂಟಿ ಮಾಡುವ ಅವಿವೇಕತನವನ್ನು ನೋಡಿರಿ. ಲೂಟಿಗಾರರು ಅದನ್ನು ತಮಗಾಗಿ ಸಹ ತಗೆದುಕೊಳ್ಳಲಿಲ್ಲ. ಒಂದು ವೇಳೆ ತೆಗೆದುಕೊಂಡಿದ್ದರೆ, ಅವರು ಉಪವಾಸವಿದ್ದಿಲ್ಲ. ಆ ಧಾನ್ಯ ಹಸಿದವರಿಗಾಗಿತ್ತು. ಅದರ ದುರುಪಯೋಗವಾಗುತಿತ್ತೆಂದು ಕಂಡುಬಂದಿದ್ದರೆ ಲೂಟಿ ಮಾಡಿದರೆ ಅದು ತಪ್ಪುವದಿಲ್ಲ. ಕಸಿದುಕೊಳ್ಳಲು ಕಾಳು ಇರುವಷ್ಟು ದಿನ ಕಸಿದುಕೊಳ್ಳುವವರು ಲೂಟಿಯಾದ ಕಾಳನ್ನು ತುಂಬಿಕೊಂಡೇ ತೀರುವರು ಹೀಗೆ ಈ ಉಭಯ ಲೂಟಿಗಾರರ ಮಧ್ಯ ಹಸಿದವರು ಮತ್ತಷ್ಟು ಹಸಿದು ಸಾಯುತ್ತಾರೆ.

ಬಂಡುಗಾರರನ್ನು ಪ್ರಚೋದಿಸಿದವರಿಗೆ ತಾವು ಏನು ಮಾಡುತ್ತಿರುವೆವೆಂಬುದು ಗೊತ್ತಿರುವದಿಲ್ಲ. ಬಂಡುಗಾರರು ಕೊನೆಗೆ ಶರಣುಹೋಗತಕ್ಕವರೆ ಅಥವಾ ಹಿಂಸೆಯ ಪಾಠ ಕಲಿಸಲು

-೯ನೇ ಪುಟ ನೋಡಿರಿ

# ಘೋರ ಭವಿತವ್ಯ

ಮುಂಬರುವ ಬರಗಾಲದ ಘೋರ ರೂಪವೇ ಗಾಂಧೀಜಿ ಮದ್ರಾಸಿನಿಂದ ಮರಳಿ ಸೇವಾಗ್ರಾಮದಲ್ಲಿ ಉಳಿದುಕೊಂಡ ಅಲ್ಪಾವಧಿಯಲ್ಲಿ ಅವರ ಮನಸ್ಸಿನಲ್ಲಿ ಸುಳಿದಾಡುತಿತ್ತು. ಬಂಗಾಲದಲ್ಲಿದ್ದಾಗಲೆ ಅವರಿಗೆ ಈ ಭಾವೀ ಸಂಕಟದ ಮುನ್ನೆಚ್ಚರಿಕೆ ದೊರೆತಿತ್ತು. ಬಿಹಾರ, ಮದ್ರಾಸುಗಳಲ್ಲಿನ ಪರಿಸ್ಥಿತಿಯನ್ನು ಕುರಿತು ಅವರಿಗೆ ಗೊತ್ತಾದ ಸಂಗತಿಗಳು ಅವರನ್ನು ಇನ್ನಷ್ಟು ಚಿಂತೆಗೊಳಗು ಮಾಡಿದವು. ಮದ್ರಾಸ ಗವರ್ನರರನ್ನು ಭೆಟ್ಟಿಯಾದಾಗ ಅವರು ಈ ಪ್ರಶ್ನೆಯನ್ನು ಚರ್ಚಿಸುವ ಅವಕಾಶ ಮಾಡಿಕೊಂಡರು. ಆದರೆ ಈ ಮಾತುಕತೆಯಿಂದ ನಿಶ್ಚಿಂತರಾಗಿ ಅವರು ಹಿಂದೆ ಬರುವಂತಾಗಲಿಲ್ಲ. ಈ ಪರಿಸ್ಥಿತಿಯಲ್ಲಿ ಸಂಬಂಧಪಟ್ಟ ಎಲ್ಲರ ಸಹಕಾರ ಅವಶ್ಯವೆನಿಸಿತು. ಅದುದರಿಂದ ಫೆಬ್ರುವರಿ ೧೧ ಕ್ಕೆ ಮಿ. ಅಬೆಲ್ಲರು ಸೇವಾಗ್ರಾಮಕ್ಕೆ ಹಾರಿಬಂದಾಗ, ತಾವು ಮಾಡಬೇಕೆಂದಿದ್ದ ಸೂಚನೆಗಳನ್ನು ಗಾಂಧೀಜಿ ಮುಂಚಿತವಾಗಿಯೆ ಒಂದು ಲೇಖದಲ್ಲಿ ಬರೆದು ಬಿಟ್ಟಿದ್ದುದನ್ನು ಕಂಡು ಅವರಿಗೆ ಸಾನಂದಾಶ್ಚರ್ಯವಾಯಿತು. ಆ ಲೇಖ ಆಮೇಲೆ ‘‘ಹರಿಜನ’’ದಲ್ಲಿ ಪ್ರಕಟವಾಗಿದೆ.

ಆರಂಭ ಮಾಡಿದ ಮೇಲೆ ಒಂದು ಕ್ಷಣ ಸುಮ್ಮನಿರುವ ಸ್ವಭಾವ ಗಾಂಧೀಜಿಯದಲ್ಲ. ಅದೇ ದಿನ ಸಂಜೆಯ ಪ್ರಾರ್ಥನೆಯಾದ ನಂತರ ಅವರು ಆಶ್ರಮವಾಸಿಗಳನ್ನು ಕುರಿತು ಭಾಷಣ ಮಾಡಿ, ಆಹಾರದ ಮಿತವ್ಯಯ ಮಾಡಿ ಉಳಿಸಿಕೊಳ್ಳುವ ಮತ್ತು ಆಹಾರದ ಬೆಳೆಗೆ ಉಪಯೋಗಿಸಬಹುದಾದ ಪ್ರತಿಯೊಂದು ಅಂಗುಲ ನೆಲವನ್ನೂ ಬಳಸಿಕೊಂಡು ಪೂರೈಕೆಯನ್ನು ಹೆಚ್ಚಿಸಿಕೊಳ್ಳುವ ಪರಮಾವಶ್ಯಕತೆಯನ್ನು ಒತ್ತಿ ಹೇಳಿದರು. ತಾ. ೧೬ ಸಂಜೆ ತಮ್ಮನ್ನು ಕಾಣಬಂದ ತಾಲಿಮೀ ಸಂಘದ ಡಾ. ಝುಕೀರ ಹುಸೇನ ಮತ್ತು ಇತರ ಸದಸ್ಯರೊಡನೆಯೂ ಈ ಪ್ರಶ್ನೆಯನ್ನು ಗಾಂಧೀಜಿ ಪ್ರಸ್ತಾವಿಸಿದರು. ನಯೀ ತಾಲೀಮ (ನೂತನ ಶಿಕ್ಷಣ) ವೆಂದರೆ ಜೀವನದ ನೈಜ ಸ್ಥಿತಿಗತಿಯೊಡನೆ ನಿಕಟ ಸಂಬಂಧವಿಟ್ಟು ಬಾಳುವುದು. ಕಾರಣ ಅದು ಜೀವನದ ಸ್ಥಿತಿಗತಿಯಲ್ಲಾಗುವ ಪ್ರತಿ ಬದಲಾವಣೆಗೂ ಸಂವೇದ ತೋರಬೇಕು. “ಆದುದರಿಂದ, ಈ ಬಿಕ್ಕಟ್ಟಿನ ಪ್ರಸಂಗದಲ್ಲಿ, ಜನರು ಉಪವಾಸದಿಂದ ಸಾವಿನ ಭಯದಲ್ಲಿರುವಾಗ, ನಾವು ಶೈಕ್ಷಣಿಕ ಚಟುವಟಿಕೆಯಲ್ಲಿ ಮಗ್ನರಾಗಿದ್ದೇವೆಂದು ನೀವು ಹೇಳುವದು ಸಲ್ಲದು. ನಯೀ ತಾಲೀಮು, ಸದ್ಯಃಸ್ಥಿತಿಯನ್ನು ಲಕ್ಷಿಸಿ, ನಮ್ಮ ಆಹಾರ ಪೂರೈಕೆಯನ್ನು ಹೆಚ್ಚಿಸುವ ಮತ್ತು ಜನರಿಗೆ ಆಹಾರ ಕೊರತೆಯ ಅಪಾಯವನ್ನು ಎದುರಿಸುವ ಉಪಾಯ ಕಲಿಸುವ ಸಾಧನವಾಗಿ ಮಾರ್ಪಡಬೇಕು. ನಯೀ ತಾಲೀಮದ ವಿದ್ಯಾರ್ಥಿಗಳು ತಮ್ಮ ಸ್ವಂತ ಆಹಾರಾವಶ್ಯಕತೆಯ ಒಂದಂಶವನ್ನಾದರೂ ಉತ್ಪಾದಿಸಬಲ್ಲವರಾದರೆ, ಅಷ್ಟು ಮಟ್ಟಿಗೆ ಆಹಾರವನ್ನು ಇತರರ ಉಪಯೋಗಕ್ಕೆ ಅವರು ಬಿಡುಗಡೆ ಮಾಡಿದಂತಾಗುವದಲ್ಲದೆ, ತಮ್ಮ ಸ್ವಂತ ಉದಾಹರಣೆಯಿಂದ ಇತರರಿಗೆ ಸ್ವಾವಲಂಬನೆಯನ್ನು ಕಲಿಸಿದಂತಾಗುತ್ತದೆ.”ಯಾರೋ ಒಬ್ಬರು ದೂರಿದರು-ಸೇವಾಗ್ರಾಮ ತಾಲಿಮೀ ಸಂಘದ ವಶದಲ್ಲಿರುವ ಭೂಮಿ ಸಾರಹೀನವಾದುದು. ಅದು ಕೃಷಿಗೆ ಯೋಗ್ಯವೇ ಅಲ್ಲ, ಎಂದು. ಈ ದೂರನ್ನು ಗಾಂಧೀಜಿ ತಳ್ಳಿಹಾಕಿದರು. “ನಾವು ದಕ್ಷಿಣ ಅಫ್ರಿಕೆಯಲ್ಲಿ ಕೆಲಸ ತೊಡಗಿದ ಭೂಮಿಯ ಸ್ವರೂಪ ನಿಮಗೆ ಗೊತ್ತಿಲ್ಲ. ‘ಕೂಲಿ’ಗಳೆಂದು ಕರೆಯಲ್ಪಡುತಿದ್ದ ನಮಗೆ ಅಲ್ಲಿ ಒಳ್ಳೆಯ ಭೂಮಿ ಯಾರು ಕೊಡಬೇಕು? ಆದರೆ ಹಟದಿಂದ ಕೆಲಸ ಮಾಡಿ ನಾವದನ್ನು ಒಂದು ಹಣ್ಣಿನ ತೋಟವಾಗಿ ರೂಪಿಸಿದೆವು.

“ನಾನು ನಿಮ್ಮ ಸ್ಥಾನದಲ್ಲಿದ್ದರೆ ಮೊಟ್ಟಮೊದಲು ನೇಗಿಲನ್ನು ಉಪಯೋಗಿಸಲಿಕ್ಕಿಲ್ಲ. ನಮ್ಮ ಹುಡುಗರಿಗೆಲ್ಲ ಸಲಿಕೆಯನ್ನು ಕೊಟ್ಟು ಅದನ್ನು ಸರಿಯಾಗಿ ಪ್ರಯೋಗಿಸಲು ಕಲಿಸುತ್ತಿದ್ದೆ. ಅದೊಂದು ಕಲೆ. ಎತ್ತಿನ ಬಲವನ್ನು ಉಪಯೋಗಿಸಬೇಕಾಗಿದ್ದು ಆ ಮೇಲೆ. ಹಾಗೆಯೆ, ಭೂಮಿಯ ಸಾರರಾಹಿತ್ಯವನ್ನು ಕಂಡು ನೀವು ಹಿಂಜರಿಯುವದೂ ನನಗೆ ಒಗ್ಗುದಿಲ್ಲ. ಮೇಲಿನ ತೆಳ್ಳನ್ನ ಕೆಸರು ಅಥವಾ ಎರೆಯಿಂದಲೇ ನಾವು ಎಷ್ಟೋ ಉಪಯುಕ್ತ ತರಕಾರಿಗಳನ್ನೂ ಕುಡಿಕೆಬಳ್ಳಿಗಳನ್ನೂ ಬೆಳೆಯಬಹುದು. ಮಲವನ್ನು ಹರವಾದ ತಗುಗಳಲ್ಲಿ ಗೊಬ್ಬರವಾಗಿ ಮಾರ್ಪಡಿಸುವದನ್ನು ಒಡನೆ ಆರಂಭಿಸಬಹುದು. ಈ ಮಾರ್ಪಾಟಿಗೆ ಎರಡು ವಾರಕ್ಕಿಂತ ಹೆಚ್ಚು ಕಾಲ ಬೇಕಾಗುವದಿಲ್ಲ. ಸ್ನಾನ ನಿತ್ಯಕರ್ಮಗಳ ಅಥವಾ ಅಡಿಗೆ ಮನೆಯ ಪ್ರತಿಯೊಂದು ಥಾಲಿ ನೀರನ್ನೂ ತರಕಾರಿಯ ತೋಟಕ್ಕೆ ಹೊರಳಿಸಬೇಕು. ಒಂದು ಬಿಂದು ನೀರನ್ನು ಕೂಡ ಹಾಳಾಗಗೊಡಬಾರದು. ತೊಪ್ಪಲ ಪಲ್ಲೆಗಳನ್ನು ಮಣ್ಣಿನ ಕುಡಿಕೆಗಳಲ್ಲಿ ಇಲ್ಲವೆ ಹಳೆ ತಗಡಿನ ಡಬ್ಬಿಗಳಲ್ಲಿ ಕೂಡ ಬೆಳೆಯಬಹುದು. ಇಂಥ ಚಿಲ್ಲರೆ ಅವಕಾಶವನ್ನೂ ಕಡೆಗಣಿಸಬಾರದು. ಈ ಪ್ರಯೋಗ ರಾಷ್ಟ್ರೀಯ ಪ್ರಮಾಣದಲ್ಲಾದರೆ ಅದರ ಒಟ್ಟು ಪರಿಣಾಮ ಪ್ರಚಂಡವಾಗುವದು.”

## ರುಂಗಟಾ ಭವನದಲ್ಲಿ

ಪುಣೆಗೆ ಹೋಗುತ್ತ ಮುಂಬಯಿಯಲ್ಲಿನ ಎರಡು ದಿನಗಳ ವಸತಿಯನ್ನು ಗಾಂಧೀಜಿ ತಮ್ಮ ಮನಸ್ಸಿನಲ್ಲಿ ಈಚೆಗೆ ಸುತ್ತಿ ಸುಳಿಯುತ್ತಿರುವ ಎರಡು ವಿಷಯಗಳಲ್ಲಿ ಮುಂಬಯಿ ಜನತೆಗೆ ತಮ್ಮ ಸಂದೇಶವನ್ನು ಬೀರಲು ಬಳಸಿಕೊಂಡರು. ಅವೆಂದರೆ ಒಂದು, ಪ್ರಾರ್ಥನೆಯಲ್ಲಿ ಶಿಸ್ತು, ಇನ್ನೊಂದು, ಆಹಾರ ಬಿಕ್ಕಟ್ಟು. ತಾ ೧೮ ಸಂಜೆ ರೂಢಿಯಂತೆ ರುಂಗಟಾ ಭವನದಲ್ಲಿ ಬಹಿರಂಗ ಪ್ರಾರ್ಥನೆ ನಡೆಯಿತು. ‘‘ ರಾಮಧುನ ’’ ವನ್ನು ತಾಳ ವಾದನದ ಸಹಿತ ಸಾಮೂಹಿಕವಾಗಿ ಹಾಡಿದ್ದು ಈ ಪ್ರಾರ್ಥನಾ ಸಭೆಯ ವೈಶಿಷ್ಟ್ಯವಾಗಿತ್ತು. ಈ ಬಗೆಯ ಪ್ರಾರ್ಥನೆ ಮುಂಬಯಿಯಲ್ಲಿ ಅದೇ ಮೊದಲು. ಇದರ ಪರಿಪಾಠ ಬಿದ್ದುದು ಗಾಂಧೀಜಿಯ ಈಚೆಗಿನ ಬಂಗಾಲ, ಅಸಾಮು, ಮದ್ರಾಸ ಸಂಚಾರದ ನಂತರ. ಈ ಬಗೆಯ ಭಜನೆಯ ಅರ್ಥ ಮತ್ತು ಸಂಕೇತ ಈ ಪತ್ರಿಕೆಯಲ್ಲಿ ಇನ್ನೊಂದೆಡೆ ವಿವೇಚಿಸಲ್ಪಟ್ಟಿದೆ. ಸಭೆಗೆ ನೆರೆದವರಲ್ಲಿ ಹಲವರು ಮೇಳಬದ್ಧವಾಗಿ ತಾಳವನ್ನು ಬಾರಿಸುವದರಲ್ಲಿ ತಪ್ಪಿಬಿದ್ದರು. ಇದಕ್ಕಾಗಿ ಗಾಂಧೀಜಿಯಿಂದ ಅವರು ತುಸು ಅನಿಸಿಕೊಳ್ಳಬೇಕಾಯಿತು. ಮುಂಬಯಿ ಸಂಗೀತಪ್ರಿಯ ನಗರವೆಂದು ಪ್ರಸಿದ್ಧಿ. ಸಂಗೀತಾಭ್ಯಾಸಕ್ಕೆ ಅಲ್ಲಿ ಬೇಕಾದಷ್ಟು ಅನುಕೂಲವೂ ಇದೆ. ಮುಂಬಯಿ ನಿವಾಸಿಗಳು ಇದಕ್ಕಿಂತ ಹೆಚ್ಚು ಕೌಶಲ ತೋರಿಸುವರೆಂದು ಗಾಂಧೀಜಿ ನಿರೀಕ್ಷಿಸಿದ್ದರು. ಬದಲಿಗೆ, ಸಭೆಯಲ್ಲಿ ಅವ್ಯವಸ್ಥೆಯೂ ತಾಳ ಬಾರಿಸುವದರಲ್ಲಿ ಲಯಗೇಡಿತನವೂ ಅವರಿಗೆ ಕಾಣಬಂತು. ‘‘ ನಗುವದಕ್ಕೆ ಕೆಲೆಯುವದಕ್ಕೂ ಒಂದು ಹೊತ್ತು ಗೊತ್ತು ಇರಬೇಕು. ಮೌನ ಗಾಂಭೀರ್ಯಗಳಿಗೂ ಒಂದು ಸಮಯವಿದೆ ’’ ಎಂದವರು ಮೂದಲಿಸಿದರು. ‘‘ ಸ್ವತಂತ್ರರಾಗಬಯಸುವವರು ವಧಸ್ತಂಭವನ್ನು ಏರುವಾಗಲೂ ನಗುಮೊಗರಾಗಿರಲು ಕಲಿಯಬೇಕೆಂದು . ನಾನು ಎಷ್ಟೋ ಸಾರೆ ಹೇಳಿದ್ದೇನೆ. ಆದರೆ ಹೊತ್ತುಗೆಟ್ಟ ನಗೆ ಗೌರವಭಂಗಕ್ಕೆ ಕಾರಣವಾಗುತ್ತದೆ. ಅಂತೆಯೇ ಹೊತ್ತುಗೆಟ್ಟು ಒದರುವದೂ ಕೆಟ್ಟ ಚಾಳಿ. ಇಪ್ಪತ್ತುನಾಲ್ಕು ತಾಸು ತನ್ನನ್ನು ಸೃಜಿಸಿದವನನ್ನು ನೆನೆಯುವದು ಮನುಷ್ಯನ ಧರ್ಮ. ಅದು ಸಾಧ್ಯವಿಲ್ಲದಿದ್ದರೆ ದೇವಸಾನ್ನಿಧ್ಯವನ್ನು ನೆನಸಿಕೊಳ್ಳಲು ಪ್ರಾರ್ಥನೆಗಾಗಿ ನೆರೆಯಬೇಕು. ನಾವು ಹಿಂದುಗಳಿರಲಿ, ಮುಸಲ್ಮಾನರಿರಲಿ, ಪಾರ್ಸಿ ಕ್ರಿಶ್ಚನ ಅಥವಾ ಸೀಖರಿರಲಿ, ಎಲ್ಲರೂ ಒಬ್ಬನೇ ಪರಮಾತ್ಮನನ್ನು ಆರಾಧಿಸುತ್ತೇವೆ. ಸಾಮೂಹಿಕ ಪ್ರಾರ್ಥನೆಯೆಂಬುದು ಸಹ-ಆರಾಧನೆಯಿಂದ ಮಾನವ್ಯದ ಮೂಲಐಕ್ಯವನ್ನು ಸ್ಥಾಪಿತಗೊಳಿಸುವ ಒಂದು ಸಾಧನ. ‘‘ ರಾಮಧುನ ’’ ದ ಸಾಮೂಹಿಕ ಭಜನೆ ಮತ್ತು ತಾಳ ವಾದನ ಅದರ ಬಾಹ್ಯರೂಪ. ಅದು ಕೇವಲ ಯಾಂತ್ರಿಕ ಕ್ರಿಯೆಯಾಗದೆ ಅಂತರಂಗದ ಸಾಮರಸ್ಯದ ದ್ಯೋತಕವಾಗಿದ್ದರೆ——ಹಾಗಾಗಿರಬೇಕು——ಅನುಭವಕ್ಕೆ ಮಾತ್ರ ವೇದ್ಯವಾಗುವ ಶಕ್ತಿಯನ್ನೂ ಮಧುರ ಮನೋಹರ ವಾತಾವರಣವನ್ನೂ ಉಂಟುಮಾಡಬಲ್ಲದು.

‘‘ ಪೋಲೀಸ ಮತ್ತು ಸೈನ್ಯದಲ್ಲಿ” ಗಾಂಧೀಜಿ ಮುಂದುವರಿಸಿದರು “ಅಂಗ ಸಾಧನೆ ಮತ್ತು ಶಸ್ತ್ರಾಸ್ತ್ರಗಳನ್ನು ಉಪಯೋಗಿಸುವ ಕ್ರಮದ ಅಭ್ಯಾಸ ಶಿಸ್ತಿನ ಅವಶ್ಯಕ ಅಂಗವೆಂದು ಪರಿಗಣಿಸಲ್ಪಡುತ್ತದೆ. ಹೆಜ್ಜೆ ಮೇಳೈಸಿ ಕೂಚು ಮಾಡುವದು ಮತ್ತು ಸಾಮೂಹಿಕವಾಗಿ ನಿಶ್ಶಬ್ದ ಸಮವಿನ್ಯಾಸದಲ್ಲಿ ಅಂಗಭಂಗಿ ಮಾಡಿ ತೋರುವದೂ ಸೈನಿಕ ಸಾಧನೆಯಲ್ಲಿ ಅಡಕವಾಗುತ್ತದೆ. ಸೈನಿಕ ಶಿಕ್ಷಣದಲ್ಲಿ ಅಂಗಸಾಧನೆ ಮತ್ತು ಶಸ್ತ್ರಧಾರಣೆಯ ಅಭ್ಯಾಸ ಎಷ್ಟು ಮಹತ್ವದ್ದೋ ತಾಳ, ಬಾಜಿಸುತ್ತ ಸಮಮೇಳದಿಂದ ರಾಮಧುನದ ಸಾಮೂಹಿಕ ಭಜನೆ ಮಾಡುವದು ಅಹಿಂಸಾತ್ಮಕ ಶಿಸ್ತಿನಲ್ಲಿ ಅಷ್ಟೇ ಮಹತ್ವದ್ದು.” ಆದರೆ ಈ ಉಪದೇಶ ಅವರ ಹೃದಯಕ್ಕೆ—ಬರಿ ಬುದ್ಧಿಗಲ್ಲ—ಗಮ್ಯವಾದರೆ ಮಾತ್ರ ಅದರಿಂದ ಫಲ ದೊರಕಬಲ್ಲದೆಂದು ಅವರು ಎಚ್ಚರಿಸಿದರು. ಒಣ ಬುದ್ಧಿಕೌಶಲದಿಂದ ನಾವು ಹೆಚ್ಚು ಸಾಧಿಸಲಾರೆವು.

## ಸೇವಕರೋ ಒಡೆಯರೋ?

ಅನಂತರ ಗಾಂಧೀಜಿ ಆಹಾರ ಬಿಕ್ಕಟ್ಟಿನ ಕಡೆಗೆ ಹೊರಳಿ, ಭವಿತವ್ಯ ಬಹಳ ಭಯಾನಕವಾಗಿದೆಯೆಂದರು. ಇದರಲ್ಲಿ ಸರಕಾರ ವಹಿಸಿದ ಪಾತ್ರಕ್ಕಾಗಿ ನೀವು ಅದನ್ನು ಬೇಕಾದಷ್ಟು ಟೀಕಿಸಬಹುದು. ಸ್ವತಃ ನಾನೇ ಸರಕಾರವನ್ನು ಟೀಕಿಸುವಲ್ಲಿ ನಿರ್ದಾಕ್ಷಿಣ್ಯನೇ ಆಗಿದ್ದೆನು, ಅಂಥ ಪ್ರಸಂಗ ಬಂದಾಗ, ನಾನು ಎಷ್ಟೇ ಏಕಾಕಿಯಾಗಿರಲಿ, ಇನ್ನಾದರೂ ಟೀಕಿಸುವವನೇ. ೧೯೪೨ ರಲ್ಲಿ ನಾನು ಹೇಳಿದ್ದಕ್ಕೇ ಈಗಲೂ ಅಂಟಿಕೊಂಡಿದ್ದೇನೆ. ಬ್ರಿಟಿಶರು ಜನರ ಮೇಲೆ ಒಡೆತನ ನಡೆಸದೆ ಸೇವಕರಾಗಿ, ಕೇವಲ ಅಚ್ಚಿನ ರಾಷ್ಟ್ರಗಳನ್ನು ಸೋಲಿಸುವ ಸಲುವಾಗಿ, ಈ ದೇಶದಲ್ಲಿ ಉಳಿದುಕೊಳ್ಳುತಿದ್ದರೆ ನನ್ನದೇನೂ ವಿರೋಧವಿದ್ದಿಲ್ಲ. ಅದರ ಬದಲಿಗೆ, ಅವರು ಮದಾಂಧರಾಗಿ ಜನಪ್ರತಿನಿಧಿಗಳ ಎಚ್ಚರಿಕೆಗಳನ್ನು ಗಾಳಿಗೆ ತೂರಿ, ಉದ್ದೇಶಪೂರ್ವಕವಾಗಿ ಅಲ್ಲದಿರಬಹುದು, ಆದರೂ ಈ ದೇಶದ ಮೂಲಭೂತ ಸಂಪತ್ತಿಯನ್ನು ಸೂರೆ ಮಾಡಿದ್ದರಿಂದ ಈ ಗತಿಗೆ ನಾವು ಗುರಿಯಾಗಿದ್ದೇವೆ.

## ಔದಾಸೀನ್ಯ, ಪೂರ್ವಗ್ರಹಗಳು ಹೋಗಬೇಕು

ಹೀಗಿದ್ದರೂ ಆಹಾರ ಕೊರತೆಯನ್ನು ಗಾಂಧೀಜಿ ಅರ್ಥಮಾಡಿಕೊಳ್ಳಬಲ್ಲರು. ಆದರೆ ಬಟ್ಟೆಯ ಕೊರತೆಯೇಕೋ ಅವರಿಗೆ ತಿಳಿಯಲಾರದಾಗಿದೆ. ಹಿಂದುಸ್ತಾನದಲ್ಲಿ ಬೇಕೆಂಬಷ್ಟು ಹತ್ತಿ ಬೆಳೆಸಬಹುದು. “ಈ ನಮ್ಮ ಭೌತಸಂಪತ್ಸಮೃದ್ಧವಾದ ದೇಶದಲ್ಲಿ ಅಕ್ಷಯ ಹಿಮನಿಬಿಡವಾದ ಉತ್ತುಂಗ ಹಿಮಾಲಯ ಪರ್ವತಗಳಿವೆ. ಅಲ್ಲಿ ತ್ರಿಲೋಕಾಧೀಶ್ವರನೇ ವಾಸಿಸುವನೆನ್ನುತ್ತಾರೆ. ಅಲ್ಲಿ ಗಂಗೆಯಂಥ ಮಹಾ ನದಿಗಳಿವೆ. ಆದರೆ ನಮ್ಮ ದುರ್ಲಕ್ಷ್ಯದಿಂದಲೂ ಮೌಢ್ಯದಿಂದಲೂ ವರ್ಷದ ಮಳೆಯೆಲ್ಲ ಬಂಗಾಲ ಕೊಲ್ಲಿಗೂ ಅರಬ್ಬೀ ಸಮುದ್ರಕ್ಕೂ ಹರಿದು ಹೋಗುತ್ತದೆ. ಈ ಎಲ್ಲ ನೀರನ್ನು ತಡೆದು ಅಣೆಕಟ್ಟು ಮತ್ತು ಕೆರೆಗಳ ಮೂಲಕ ವ್ಯವಸಾಯಕ್ಕೆ ಉಪಯೋಗಿಸಿದರೆ ಹಿಂದುಸ್ತಾನದಲ್ಲಿ ಬರಗಾಲವಾಗಲಿ ಆಹಾರ ಕೊರತೆಯಾಗಲಿ ಉಂಟಾಗುವದು ಸಾಧ್ಯವಿಲ್ಲ. ಅಂತೆಯೆ, ಪ್ರತಿಯೊಂದು ಮನೆಯಲ್ಲಿಯೂ ಒಂದು ರಾಟೆ ಅಥವಾ ತಕಲಿಯ ರೂಪ ಧರಿಸಿದ ವಾಮನ ಗಿರಣಿಯನ್ನು ಸ್ಥಾಪಿಸಿದರೆ ಬಟ್ಟೆ ಕೊರತೆಯನ್ನು ಒಡನೆ ನೀಗಿಸಬಹುದು. ಹೀಗೆ ಮಾಡಿದರೆ ನಮಗೆ ಬೇಕಾದ ಬಟ್ಟೆಯೆಲ್ಲ ಪುಕ್ಕಟೆಯೆಂಬಂತೆ ದೊರೆಯುವದು. ಈ ಪರಿಹಾರೋಪಾಯವನ್ನು ಸರಕಾರದ ಬುದ್ಧಿಗೆ ನಾಟಿಸಲು ನಾನು ಕಂಠಶೋಷಣೆ ಮಾಡಿಕೊಂಡದ್ದು ಅಷ್ಟಿಷ್ಟಲ್ಲ ಇದು ಒಡನೆ ಆಗಬಲ್ಲ ಕೆಲಸ. ಇದನ್ನು ಕಾರ್ಯರೂಪಕ್ಕಿಳಿಸಲು ಯೋಗ್ಯ ಕ್ರಮಗಳನ್ನು ಕೈಕೊಂಡರೆ ಒಬ್ಬನೇ ಒಬ್ಬ ಪ್ರಜೆಯೂ ಬತ್ತಲೆಯಾಗಿರಬೇಕಿಲ್ಲೆಂದು ನನ್ನ ವಾದ. ಅದಕ್ಕಿರುವ ಒಂದೇ ಒಂದು ತೊಡಕೆಂದರೆ ಉಚ್ಚ ವರ್ಗಗಳಲ್ಲಿರುವ ಔದಾಸೀನ್ಯ, ಪೂರ್ವಗ್ರಹ.

“ಆಹಾರ ಕೊರತೆಯ ಮಟ್ಟಿಗೆ, ಅದರ ನಿವಾರಣೆಗೆ ಬೇಕಾದ ಸಾಧನ ಸಂಪತ್ತಿಯೆಲ್ಲ ಸರಕಾರದ ಕೈಯಲ್ಲಿ ಮಾತ್ರ ಇಲ್ಲವೆಂದು ನಾನು ಒಪ್ಪುತ್ತೇನೆ. ಆದರೂ ನಾವು ಆಶೆಗುಂದಿ, ಮಳೆಯನ್ನು ನಿರೀಕ್ಷಿಸುತ್ತ ಆಕಾಶದಲ್ಲಿ ದಿಟ್ಟಿ ನಟ್ಟು, ದೈವದ ಕೈಯಲ್ಲಿ ಎಲ್ಲವನ್ನೂ ಬಿಟ್ಟು ಕೂಡಬೇಕಾಗಿಲ್ಲ. ಭೂಮಿಯ ಗರ್ಭದಲ್ಲಿ ಅಕ್ಷಯವಾದ ಜಲಸಂಗ್ರಹವುಂಟು. ಎರಡು ಸಾವಿರ ಅಡಿ ಆಳಕ್ಕೆ ತೋಡಬೇಕಾಗಲೊಲ್ಲದೇಕೆ, ಅದರೂ ತೋಡಿ ಆ ನೀರು ದೊರಕಿಸಿ, ಅದನ್ನು ಆಹಾರದ ಹುಟ್ಟುವಳಿಗೆ ಉಪಯೋಗಿಸಬೇಕು. ಬರುವ ಅನಾಹುತವನ್ನು ತಡೆಯಲು ಎಲ್ಲ ಲಭ್ಯ ಸಾಧನಗಳನ್ನು ಉಪಯೋಗಿಸಿ ಮುಗಿಸಿದ ವಿನಾ ದೈವವನ್ನು ಶಪಿಸುವದು ಸಲ್ಲದು.

“ಮುಂಬಯಿಯಂಥ ನಗರಗಳಲ್ಲಿ ಇಂದು ಔತಣ ಉಪಚಾರಗಳೆಂದು ಎಷ್ಟೋ ಆಹಾರ ಅಪವ್ಯಯವಾಗುತ್ತಿದೆ. ಪ್ರತಿಯೊಬ್ಬ ಸ್ತ್ರೀ-ಪುರುಷ ಬಾಲಕನೂ ಈ ವಿಪತ್ಕಾಲದಲ್ಲಿ ಒಂದೊಂದು ಅಗುಳು ಅನ್ನವನ್ನೂ ಒಂದೊಂದು ಹನಿ ಎಣ್ಣೆ ತುಪ್ಪವನ್ನೂ ಉಳಿಸಿಕೊಳ್ಳಬೇಕಾದ್ದು ಪವಿತ್ರ ಕರ್ತವ್ಯ. ಉಪವಾಸದಿಂದ ಕೋಟ್ಯಂತರ ಜನರು ಸಾವನ್ನು ಎದುರಿಸುತ್ತಿರುವಾಗ ಯಾರೂ ತನ್ನ ದೇಹದ ಆರೋಗ್ಯ ಸಾಮರ್ಥ್ಯಗಳನ್ನು ಕಾಯಲು ಅವಶ್ಯವಾದುದಕ್ಕಿಂತ ಸ್ವಲ್ಪವೂ ಹೆಚ್ಚು ಉಣ್ಣತಕ್ಕದ್ದಲ್ಲ. ಹೀಗೆ ಉಳಿಸಿದ ಆಹಾರ ವಸ್ತುಗಳನ್ನು ಬಡಜನರಲ್ಲಿ-ಭಿಕ್ಷೆಯೆಂದಲ್ಲ, ಪ್ರಾಮಾಣಿಕ ಶ್ರಮಕ್ಕೆ ಪ್ರತಿಫಲವೆಂದು—ಹಂಚಬಹುದು. ”

ಮುಂದುವರಿಯುತ್ತ ಗಾಂಧೀಜಿ ಇಂದು ದೇಶವನ್ನು ಆವರಿಸಿರುವ ಅಸಹಾಯತೆಯ ರೋಗವನ್ನು ಪೃಥಕ್ಕರಿಸಿ ಅದಕ್ಕೆ ಇಬ್ಬಗೆಯ ದಾಸ್ಯವೇ ಕಾರಣವೆಂದು ಸಿದ್ಧಪಡಿಸಿದರು—ಒಂದು ವಿದೇಶೀ ನೊಗ ಹೊತ್ತ ದಾಸ್ಯ, ಇನ್ನೊಂದು ಔದಾಸೀನ್ಯ ಆಲಸ್ಯಗಳ ದಾಸ್ಯ. ಎರಡನೆಯ ದಾಸ್ಯಕ್ಕೆ ಉದಾಹರಣೆಯಾಗಿ, ಮುಂಬಯಿ ಕಾಲಬಾ ದೇವಿ ಖಾದೀ ಭಾಂಡಾರದವರು ನೂಲುವ ಮತ್ತು ಹಿಂಜುವ ಉಪಕರಣಗಳನ್ನೂ ನೂಲುವ ಮತ್ತು ಸಂಬಂಧಪಟ್ಟ ವೃತ್ತಿಗಳಲ್ಲಿ ಶಿಕ್ಷಣವನ್ನೂ ಬೇಕಾದವರಿಗೆ ದೊರಕಿಸಿಕೊಡುವದಾಗಿ ಜಾಹೀರ ಪಡಿಸಿದ್ದರೂ ಈ ಕೊಡುಗೆಯನ್ನು ಸ್ವೀಕರಿಸಲು ಬಹಳ ಕಡಿಮೆ ಜನರು ಮುಂದೆ ಬಂದುದನ್ನು ಗಾಂಧೀಜಿ ಉಲ್ಲೇಖಿಸಿದರು. ನಾವು ಔದಾಸೀನ್ಯ ಆಲಸ್ಯಗಳಿಂದ ಮುಗ್ಧರಾಗಿರದಿದ್ದರೆ, ಖಾದೀ ಭಾಂಡಾರಕ್ಕೆ ಜನರು ಹಗಲಿರುಳು ಹರಿಗಡಿಯದ ಧಾರೆಯಲ್ಲಿ ಮುಸುರಿ, ಬಟ್ಟೆಯ ಕೊರತೆಯನ್ನು ಹಳೆಯ ಕ[illegible]ಯಾಗಿ ಮಾಡಿಬಿಡಬಹುದಾಗಿತ್ತು.

## ನಿಚ್ಚಳವಾದ ವಿಚಾರ ಬೇಕಾಗಿದೆ

ರಾಜಕೀಯ ದಾಸ್ಯ ಬೇಗನೆ ಕೊನೆಗೊಳ್ಳುವದೆಂದು ಎಲ್ಲರೂ—ತಾವು ಕೂಡ—ಆಶೆ ಕಟ್ಟಿಕೊಂಡಿರುವದಾಗಿ ಗಾಂಧೀಜಿ ಹೇಳಿದರು. ಆದರೆ ವಿದೇಶಿ ನೊಗವನ್ನು ತೆಗೆದುಹಾಕಿದ ಮಾತ್ರಕ್ಕೆ ಜನರಿಗೆ ಸ್ವಾತಂತ್ರ್ಯ—ಆ ಶಬ್ದದ ನಿಜವಾದ ಅರ್ಥದಲ್ಲಿ—ಬಂದಂತಾಗಲಿಲ್ಲ. ಕಾಂಗ್ರೆಸ್ ಅಧ್ಯಕ್ಷರು ಇದೇ ಈಚೆಗೆ ಕಲಕತ್ತೆಯಲ್ಲಾದ ಘಟನೆಗಳನ್ನು ಸ್ವಾತಂತ್ರ್ಯಕಾಮಿಗಳಾದ ಜನರಿಗೆ ಕಲಂಕಪ್ರಾಯವಾದವುಗಳೆಂದು ಖಂಡಿಸಿದ್ದಾರೆ. ಇನ್ನೊಮ್ಮೆ ಹೀಗೆ ಜನರು ಅಪಕೀರ್ತಿಗೆ ಕಾರಣವಾಗುವಂತೆ ನಡೆದುಕೊಳ್ಳಬಾರದೆಂದು ಗಾಂಧೀಜಿ ಆಶಿಸಿದರು. ಪುಂಡಾಟಿಕೆಯಿಂದ ಬ್ರಿಟಿಶರನ್ನು ಹಿಂದುಸ್ತಾನದಿಂದ ಹೊರಗಟ್ಟಬಲ್ಲೆವೆಂದು ಜನರು ಭಾವಿಸುತ್ತಿದ್ದರೆ ಅದು ದೊಡ್ಡ ಆತ್ಮವಂಚನೆಯೆ ಸರಿ. ಸ್ವರಾಜ್ಯಸಾಧನೆಗೆ ಸತ್ಯ ಅಹಿಂಸೆಗಳು ಮಾತ್ರ ತಮ್ಮ ಸಾಧನವೆಂದು ಪಣತೊಟ್ಟ ಮೇಲೆ, ತಮ್ಮ ನಿರ್ವೀರ್ಯ ಕ್ರೋಧವನ್ನು ಸುಲಿಗೆ, ಕಲ್ಲೊಗೆತ, ಅಗ್ನಿಪ್ರತಿಷ್ಠೆ, ಬೈಗಳುಗಳ ಮೂಲಕ ಪ್ರದರ್ಶಿಸಿದರೆ ಜನರು ಜಗತ್ತಿನ ದೃಷ್ಟಿಯಲ್ಲಿ ತಮ್ಮ ಧರ್ಮದ ಹೆಸರಿಗೆ ಮಸಿಬಳಿದು ತಾವೂ ನೀಚರೆನಿಸುವರು. ೪೦ ಕೋಟಿ ಹಿಂದೀಯರು ಏಕೀಭಾವದಿಂದ, ಏಕಕಂಠದಿಂದ ಸತ್ಯಅಹಿಂಸೆಗಳಿಂದಲೇ ತಾವು ಸ್ವರಾಜ್ಯವನ್ನು ಗಳಿಸುವದಾಗಿ ಶಪಥ ಮಾಡಿದರೆ, ಬರಿ ಇಚ್ಛಾಮಾತ್ರದಿಂದ ಅದು ಅವರದಾಗುವದೆಂದು

—೯ನೇ ಪುಟ ನೋಡಿರಿ

## ಘೋರ ಭವಿತವ್ಯ

(ಅನೇ ಪುಟದಿಂದ ಮುಂದರಿದುದು)

ಹಿಂದೆ ಹೇಳಿದ್ದನ್ನೇ ಅವರು ಮತ್ತೊಮ್ಮೆ ನುಡಿದರು. ಆದರೆ ಆ ವಿಶ್ವಾಸ ಜನರಲ್ಲಿ ಇಲ್ಲದಿದ್ದರೆ ಸರಿಯಾಗಿ ಚಿಂತಿಸಿದ ಮೇಲೆ ಬಹಿರಂಗವಾಗಿ [illegible]ಹಿಂಸೆಯನ್ನು ನಿರಾಕರಿಸುವದು ಯೋಗ್ಯ ಹಾದಿ. ಗಾಂಧೀಜಿಯಂಥವರು ಅದು ಜಾಣತನವೆಂದು ಒಪ್ಪಲಿಕ್ಕಿಲ್ಲ. ಆದರೆ ಯಾರೂ ಜನರನ್ನು ಅಪ್ರಾಮಾಣಿಕರೆಂದಾಗಲಿ ಹೇಡಿಗಳೆಂದಾ[illegible]ರೆಯುವಂತಿಲ್ಲ. ಇಂದು ಮಾತ್ರ ಆ ಅಪವಾದದಿಂದ ಅವರು ಪಾರಾಗುವಂತಿಲ್ಲವೆಂದು ಗಾಂಧೀಜಿ ಶಂಕಿಸಿದರು. ಹಿಂದುಸ್ತಾನಕ್ಕೆ ಮರಳಿದ ನಂತರ ಖಡ್ಗದಿಂದಲ್ಲ, ಅಹಿಂಸೆಯಿಂದ ದೇಶಸೇವೆ ಮಾಡಬೇಕೆಂದು ನೇತಾಜಿ ಸುಭಾಸ ಬೋಸರು ತಮಗೆ ಉಪದೇಶ ಮಾಡಿದ್ದಾಗಿ ಕ್ಯಾ. ಶಾ ನವಾಜರು ಸಾರಿದ್ದುದನ್ನು ಅವರು ಜನರಿಗೆ ನೆನವರಿಕೆಮಾಡಿಕೊಟ್ಟರು. "ಹಿಂದುಸ್ತಾನವೇ ಸಾಕಷ್ಟು ಶಸ್ತ್ರಾಸ್ತ್ರಗಳನ್ನೂ ಯುದ್ಧಕಲಾ ಕುಶಲ ಸೈನಿಕರನ್ನೂ ನಿರ್ಮಿಸಬಲ್ಲದೆಂದೇ ಇಟ್ಟುಕೊಂಡರೂ ಆಯುಧ ಧಾರಣಮಾಡಲರಿಯದ ಜನರಿಗೆ ಸ್ವರಾಜ್ಯ ಸಾಧನೆಯಲ್ಲಿ ಯಾವ ಭೂಮಿಕೆ, ಯಾವ ಪಾಡು ? ಸ್ವರಾಜ್ಯ ಸಂಪಾದನೆಯಲ್ಲಿ ಹೆಂಗಸರು ಮಕ್ಕಳು ಕೂಡ ಅತ್ಯಂತ ಬಲಿಷ್ಠರಿಗೆ ಸಮಾನವಾದ ಭಾಗ ವಹಿಸಬೇಕೆಂದು ನನ್ನ ಇಚ್ಛೆ. ಅದು ಅಹಿಂಸೆಯಿಂದಲೇ ಸಾಧ್ಯ, ಆದುದರಿಂದ, ನನ್ನ ಅಭಿಪ್ರಾಯದಲ್ಲಿ ನಾನು ಒಬ್ಬಂಟಿಗನನಾಗಿಯೆ ಇರಲೊಲ್ಲೆನೇಕೆ, ಹಿಂದುಸ್ತಾನದ ಸ್ವಾತಂತ್ರ್ಯಕ್ಕೆ ಅಹಿಂಸೆಯೊಂದೇ ಸಾಧನವೆಂದು ನಾನು ದೃಢವಾಗಿ ಹೇಳು[illegible]ನೆ."

### ಅಪಾಯ ಸೂಚನೆ

ಈಗ ಬರುತ್ತಿರುವ ವರದಿಗಳಲ್ಲಿ ಅಣುಮಾತ್ರವಾದರೂ ಸತ್ಯವಿದ್ದರೆ ಗಾಬರಿಯಾಗುವ ಪರಿಸ್ಥಿತಿಯೇ ತೋರುತ್ತದೆ. ಇದೇ ಮೊನ್ನೆ ಮಾರವಾಡಿ ವಣಿಕ್ ಸಂಘದ ಅಧ್ಯಕ್ಷ ಶ್ರೀ ಎಂ ಎಲ್ ಖೇಮಕಾ ಅವರು ಅಲಹಾಬಾದದಲ್ಲಿ ಸಂಪಾದಕ ಪರಿಷತ್ತಿನಲ್ಲಿ ಹೇಳಿದ್ದು, ಹಿಂದುಸ್ತಾನ ಸರಕಾರದ ಆಹಾರ ಖಾತೆಯ ಕಾರ್ಯದರ್ಶಿಗಳು ೧೯೪೨ ಅಗಸ್ಟದಿಂದೀಚೆಗೆ ಆಹಾರ ಧಾನ್ಯದ ನಿರ್ಯಾತವನ್ನು ನಿಲ್ಲಿಸಲಾಗಿದೆಯೆಂದು ಸಾರಿದ್ದರೂ ಕಲಕತ್ತೆಯ ಸುಂಕದ ಕಟ್ಟೆಯ ನಿರ್ಯಾತ ಯಾದಿಯನ್ನು ನೋಡಿದರೆ ಈ ಅಗಸ್ಟ ಸಪ್ಟಂಬರ ತಿಂಗಳುಗಳಲ್ಲಿಯೇ ಒಂದು ಭಾರತೀಯೇತರ ವ್ಯಾಪಾರಿ ಸಂಸ್ಥೆ ೯೪ ಲಕ್ಷ ದ[illegible]ಾಯಿ ಬೆಲೆ ಬಾಳುವ ೨೨,೫೦೪ ಟನ್ ಅಕ್ಕಿ [illegible] ಕಲಕತ್ತೆಯ ಬಂದರದಿಂದ ವಿದೇಶಗಳಿಗೆ [illegible]ತ ಮಾಡಿದ್ದು ಕಂಡುಬರುತ್ತದೆ. "ಕಲಕತ್ತೆಯ ನಿರ್ಯಾತ ಯಾಡಿಯನ್ನು ಇನ್ನೂ ಸೂಕ್ಷ್ಮವಾಗಿ ಪರಿಶೀಲಿಸಿದರೆ ಬಂಗಾಲದಿಂದ ಇನ್ನಷ್ಟು ಅಕ್ಕಿಯ ನಿರ್ಯಾತವಾದುದು ಕಂಡೀತು" ಎಂದೂ ಶ್ರೀ ಖೇಮಕಾ ಅವರು ಹೇಳಿದ್ದಾರೆ. ಒಂದು ಹಿಂದೀಹಡಗ ಕಂಪನಿಯವ್ಯವಸ್ಥಾಪಕರ ಪರವಾಗಿ ಒಬ್ಬರು ಹೀಗೆ ಬರೆಯುತ್ತಾರೆ:

"ನಮ್ಮ ನೌಕಾ ಮಾರ್ಗ ೧೯೧೭ರಲ್ಲಿ ಸ್ಥಾಪಿಸಲ್ಪಟ್ಟಿತು. ಅಂದಿನಿಂದಲೂ ನಮ್ಮ ಹಡಗಗಳು ಹಿಂದೀ ಬಂದರಗಳಲ್ಲಲ್ಲದೆ ಹಾಂಗ್‌ಕಾಂಗ್ ಮೊದಲಾದ ಚೀನಿ ರೇವುಗಳ ನಡುವೆ ಯಾತಾಯಾತ ಮಾಡುತ್ತ ಇವೆ. ಯುದ್ಧಕಾಲದಲ್ಲಿ ನಮ್ಮ ಎರಡು ನಾವೆಗಳು ಜಪಾನಿಯರ ವಶವಾದವು. ನಮ್ಮ ಹೊಸ ನಾವೆ ಕಳೆದ ಮಾರ್ಚದಲ್ಲಿ ಬಂದು ಸೇರಿತಷ್ಟೆ. ಕಳೆದ ವಾರ ೧೪-೨-೪೬ನೆ ದಿನ ಈ ಹಡಗು ತನ್ನ ಮೊದಲನೇ ವಿದೇಶ ಪ್ರಯಾಣದಲ್ಲಿಯೆ ೨೯೫೧ ಚೀಲ ಹೆಸರು ಬೇಳೆಯ ಹೇರನ್ನು ಹೊತ್ತುಕೊಂಡು ಹೋಯಿತು."

ಕೊನೆ ಮಾತಿನಲ್ಲಿ ಆ ಪತ್ರ ಹೇಳುತ್ತದೆ. "ಕಳೆದತಿಂಗಳಲ್ಲಿಯೆ "ಬೇಗಮ"ಮತ್ತು "ಜಲಜ್ಯೋತಿ"ಉಗಿಹಡಗಗಳು ಕೋಲಂಬೋಕ್ಕೆ ೩೫,೦೦೦ ಚೀಲ ಬೇಳೆಕಾಳು ಮತ್ತು ಹೆಸರನ್ನು ಒಯ್ದುವು. "ಬೇಗಮ"ದಲ್ಲಿ ೨೬,೦೫೩ ಚೀಲ "ಲಂಗ" ಬೇಳೆ, ೩,೧೧೧ ಚೀಲ ತೊಗರಿ ಬೇಳೆ ಮತ್ತು ೧,೬೧೨ ಚೀಲ ಹೆಸರು ಬೇಳೆಯನ್ನು ನಿರ್ಯಾತ ಮಾಡಲಾಯಿತು. ಇದಲ್ಲದೆ ಪ್ರತಿತಿಂಗಳೂ ಅಧಿಕಾರಿಗಳ ತಿಳಿವಳಿಕೆಯಲ್ಲಿಯೆ ಅಷ್ಟೇ ಧಾನ್ಯಗಳನ್ನು ನಿರ್ಯಾತಮಾಡಲಾಗುತ್ತಿದೆಯೆಂದು ನನಗೆ ತಿಳಿದುಬಂದಿದೆ."

**ದಿನಾಜಪುರದ ಅಕ್ಕಿ ಗಿರಣಿ ಸಂಘದ ಅಧ್ಯಕ್ಷರಿಂದ ಬಂದ ವರದಿಯೂ ಅಷ್ಟೇ ಗಾಬರಿಗೊಳಿಸುವಂಥದದೆ. ಆದರ ಸಾರ ಈ ಕೆಳಗಿನಂತಿದೆ- .**

"೧೯೪೫ ರಲ್ಲಿ ಬಂಗಾಲ ಸರಕಾರದವರು ಒಮ್ಮಿಂದೊಮ್ಮೆ ಅಕ್ಕಿಯ ಬೆಲೆಯನ್ನು ಮಣಕ್ಕೆ ರೂ. ೧೧—೮—೦ ರಿಂದ ರೂ. ೯—೮—೦ ಕ್ಕಿಳಿಸಿದರು ಅಕ್ಕಿ ಗಿರಣಿಯವರು ಈ ತೀವ್ರ ಬೆಲೆಗಡಿತವನ್ನು ನಿಷೇಧಿಸಿದಾಗ ಅಕ್ಕಿ ಗಿರಣಿಗಳಲ್ಲಿದ್ದ ಎಲ್ಲ ಅಕ್ಕಿ ಮತ್ತು ಬೇಯಿಸಿದ, ಅರೆಬೇಯಿಸಿದ, ನನೆದ ಮತ್ತು ಕಚ್ಚಾ ಭತ್ತದ ಸಂಗ್ರಹಗಳನ್ನೂ ಸಂರಕ್ಷಣ ಕಾಯಿದೆಯ ಸೋಗಿನಿಂದ ಒತ್ತಾಯದಿಂದ ಕಸಿದುಕೊಂಡರು. ಮುಂದೆ ಅಕ್ಕಿಯ ಬೆಲೆ ಮಣಕ್ಕೆ ರೂ. ೧೦—೮—೦ ಕ್ಕೇರಿಸಲ್ಪಟ್ಟಾಗ ಆದರಿಂದಾಗುವ ಲಾಭದಿಂದ ಗಿರಣಿಯವರನ್ನು ವಂಚಿಸಬೇಕೆಂಬುದೇ ಇದರ ಉದ್ದೇಶವಾಗಿತ್ತು.

"೧೯೪೪ ರಲ್ಲಿ, ಬಂಗಾಲ ಸರಕಾರದವರು ದಿನಜಪುರ ಜಿಲ್ಹೆಯಿಂದ ಅರ್ಧ ಕೋಟಿ ಮಣ ಅಕ್ಕಿಯನ್ನು ರೂ. ೧೩—೮—೦ ರಿಂದ ರೂ. ೧೧—೮—೦ ರ ದರದಲ್ಲಿ ಕೊಂಡುಕೊಂಡು ಕೊರತೆ ಮತ್ತು ಸೀದಾ ಪ್ರದೇಶಗಳಲ್ಲಿ ಅದನ್ನು ಮಣಕ್ಕೆ ರೂ. ೧೬—೦—೦ ರಂತೆ ಮಾರಿದರು. ಹೀಗೆ ಸರಕಾರ ಒಂದೇ ಜಿಲ್ಹೆಯ ಅಕ್ಕಿ ಸಂಗ್ರಹದಿಂದ ಒಂದು ಕೋಟಿಗೂ ಮಿಕ್ಕಿದ ನಿಕ್ಕಿ ಲಾಭ ಗಳಿಸಿತು. ಸೀದಾ ಪ್ರದೇಶಗಳಲ್ಲಿ ಅಕ್ಕಿಯ ಬೆಲೆ ತಗ್ಗಿದಾಗ ಅಕ್ಕಿ ಗಿರಣಿಗಳಿಂದ ಅವು ಪೂರೈಸಿದ ಅಕ್ಕಿಯ ಮೇಲೆ ರೂ. ೨ ರ ವರೆಗೂ ಭಾರವಾದ "ಭತ್ತೆ" ಅಥವಾ ಡಿಸ್ಕಾಂಟ ವಸೂಲು ಮಾಡುವ ಧೋರಣೆಯನ್ನು ಸರಕಾರ ಅವಲಂಬಿಸಿತು. ೧೯೪೫ ರಲ್ಲಿ ದಿನಜಪುರ ಜಿಲ್ಹೆಯೊಂದರಿಂದಲೇ ಸರಕಾರ ಮಣಕ್ಕೆ ರೂ. ೯—೮—೦ ರಿಂದ ರೂ. ೧೦—೦—೦ ರ ದರದಲ್ಲಿ ೩೬ ಲಕ್ಷ ಮಣ ಅಕ್ಕಿಯನ್ನು ಕೂಡಿಟ ಅದನ್ನು ಮಣಕ್ಕೆ ರೂ. ೧೪—೦—೦ ರಿಂದ ರೂ. ೧೫—೦—೦ ವರೆಗಿನ ದರದಲ್ಲಿ ಮಾರಿತು. ಸರಕಾರದವರು ಮಣಕ್ಕೆರಡು ರೂಪಾಯಿಯ "ಭತ್ತೆ" ವಸೂಲು ಮಾಡತ್ತಿದ್ದ ಅಕ್ಕಿಯೂ ಹೀಗೆಯೆ ರೂ, ೧೪-೦-೦ ರಿಂದ ರೂ. ೧೫—೦—೦ ರಂತೆ ಮಾರಲ್ಪಡುತ್ತಿತ್ತೆಂದು ಇಲ್ಲಿ ಹೇಳಬೇಕಾಗಿದೆ. ಹೀಗೆ ಸರಕಾರ ಕಡಿಮೆಯೆಂದರೆ ೧॥ ಕೋಟಿ ರೂಪಾಯಿ ಲಾಭ ಮಾಡಿತು. "ಭತ್ತಾ" ಡಿಸ್ಕಾಂಟು ವಸೂಲು ಮಾಡಲು ಸರಕಾರ ಕುಟ್ಟಿದ್ದು ಹೆಚ್ಚಾಯಿತು, ಬಣ್ಣ ಸರಿಯಿಲ್ಲ, ಹಸನು ಸಾಕಾಗ ಅಲ್ಲ, ಬೆಂದದ್ದು ಹೆಚ್ಚಾಯಿತು, ಎಂಬ ಮತ್ತು ವಾರವಾರವೂ ಮಹತ್ವಾಕಾಂಕ್ಷಿ ಅಧಿಕಾರಿಗಳು ಆವಿಷ್ಕರಿಸುತಿರುವ ಇನ್ನೂ ಅನೇಕ ಹೊಸ ಹೊಸ ಗೊಳ್ಳು ಕಾರಣಗಳನ್ನು ಕೊಡುತಿದೆ. ಈ ಉಚ್ಚ ಅಧಿಕಾರಿಗಳಿಗೆ ಈಗಲೆ ಬೆನ್ನು ಬಾಗಿದ ಗಿರಾಕಿಗಳನ್ನು ಸುಲಿದು ಸರಕಾರದ ಲಾಭಬಡಕತನಕ್ಕೆ ಸಹಾಯ ಮಾಡಿದ್ದಕ್ಕಾಗಿ ಬೇಗಬೇಗನೆ ಬಢತಿ ಸಿಗುತ್ತದೆ. "ಭತ್ತೆ" ಯನ್ನು ವಸೂಲು ಮಾಡಿದಾಗ ಮಧ್ಯ ತರಗತಿಯ ಅಕ್ಕಿಯ ಬೆಲೆ ಕೀಳು ತರಗತಿಯದಕ್ಕಿಂತಲೂ ಕಡಿಮೆಯಾಗುತ್ತದೆ. ಆದರೆ ಅದನ್ನು ಸರಕಾರ ಮಧ್ಯಮ ತರಗತಿ ಅಕ್ಕಿಯೆಂದೇ ನಿರ್ಯಾತ ಮಾಡುತ್ತದೆ.

"೧೯೪೫ ರಲ್ಲಿ ನುಚ್ಚಕ್ಕಿಯನ್ನು ಇಡಿ ಅಕ್ಕಿಯಿಂದ ಬೇರ್ಪಡಿಸಿಕೊಡಲು ಅಕ್ಕಿ ಗಿರಣಿಗಳನ್ನು ನಿರ್ಬಂಧಿಸಿದ್ದಾಯಿತು. ೧೯೪೪ ರ ವರೆಗೆ ನುಚ್ಚನ್ನು ಅಕ್ಕಿಯ ಭಾಗವಾಗಿಯೆ ಉಪಯೋಗಿಸಲಾಗುತ್ತಿತ್ತು....ನುಚ್ಚಿನ ಸಂಗ್ರಹ ಬಹಳವಾಗಿ ಬೆಳೆದಿದೆ. ತಿರುಗಿಮುರುಗೀ ನೆನಪು ಕೊಟ್ಟರೂ ಮಾತುಕತೆ ನಡೆಸಿದರೂ ನುಚ್ಚಿನ ವ್ಯವಸ್ಥೆ ಮಾಡಲಾಗಿಲ್ಲ.

"ಲೆಕ್ಕವಿಲ್ಲದಷ್ಟು ಸಲ, ಅಕ್ಕಿಯ ಗಿರಣಿಯವರು ಕೊಡಮಾಡಿದ ಅಕ್ಕಿಯನ್ನು ಚೆನ್ನಾಗಿಲ್ಲವೆಂದು ಸರಕಾರದವರು ನಿರಾಕರಿಸಿದರು ಆದನ್ನು ನಿರ್ಯಾತ ಮಾಡುವದಕ್ಕೆ ಪರವಾನಿಗೆಯನ್ನು ಕೊಡಲಿಲ್ಲ. ಪರಿಣಾಮವಾಗಿ ಸಂಗ್ರಹ ಹಾಳಾಗಿ ಹೋಯಿತು. ಇಲ್ಲವೆ ದನಕರುಗಳಿಗೆ ಮೇವಾಗಿ ಉಪಯೋಗಿಸಲ್ಪಡಬೇಕಾಯಿತು.

"ನಿರಾಕರಿಸಿದ ಅಕ್ಕಿಯನ್ನು ಪ್ರಾಂತದ ಎಲ್ಲೆಯೊಳಗೇ ಆದಗೂ ನಿರ್ಯಾತ ಮಾಡಲು ಒಪ್ಪಿಗೆ ದೊರೆತಿದ್ದರೆ ಸರಕಾರಿ ಉಗ್ರಾಣಗಳಿಂದ ಪೂರೈಸಲ್ಪಡುತ್ತಿದ್ದ ಕಪ್ಪು ಸಿದ್ಧವಾದ ಮುಗ್ಗಲು ಅಕ್ಕಿಗಿಂತ ಅದು ಎಷ್ಟೋ ಮೇಲೆಂದು ಸಿದ್ಧವಾಗುತ್ತಿತ್ತು. ಈ ಪ್ರಕಾರ ಕೊರತೆಯ ಈ ದುರ್ದಿನಗಳಲ್ಲಿ ಅನೇಕ ಜನರಿಗೆ ಕನಿಷ್ಠ ಪ್ರಮಾಣದ ಅವಶ್ಯಕ ಆಹಾರ ಕೂಡ ದೊರೆಯದಂತೆ ಸರಕಾರ ನಡೆದುಕೊಳ್ಳುತಿದೆ.

"ಅಕ್ಕಿ ಗಿರಣಿಗಳನ್ನು ನೂರಕ್ಕೆ ನೂರು ಹಸನು ಮಾಡಿದ ಅಕ್ಕಿ ಒದಗಿಸಬೇಕೆಂದು ನಿರ್ಬಂಧಿಸಲಾಗಿದೆ. ಅದರಲ್ಲಿ ಒಂದಾದರೂ ಕೆಂಚು ಅಕ್ಕಿ ಹೊರಟೆತಂದರೆ ಅದು ಸಾಕಷ್ಟು ಹಸನಿಲ್ಲೆಂದು ಭಾರವಾದ 'ಭತ್ತೆ' ಹೊರಿಸಲಾಗುತ್ತಿದೆ. ಸಾಧಾರಣ ಮಟ್ಟಕ್ಕಿಂತ ಅಕ್ಕಿಯನ್ನು ಹೆಚ್ಚು ಹಸನ ಮಾಡುವದರಿಂದ ಮಣಕ್ಕೆ ಒಂದು ಸೇರು ನಷ್ಟ ಬರುವದು. ಅದು ಅಕ್ಕಿಯಲ್ಲಿರುವ ಜೀವಸತ್ವವನ್ನು ಕಡಿಮೆಮಾಡುವದಲ್ಲದೆ ದೊಡ್ಡ ಪ್ರಮಾಣದಲ್ಲಿ ನುಚ್ಚು ಹೊರಡುವದು. ಹೀಗೆ ಉಳಿಸಬಹುದಾದ ಲಕ್ಷಾಂತರ ಮಣ ಅಕ್ಕಿಯನ್ನು ಸರಕಾರ ಕೆಡಿಸುತ್ತಿದೆ."

ಗಿರಣಿಯವರನ್ನು ನೂರಕ್ಕೆ ನೂರು ಹಸನಾದ ಅಕ್ಕಿ ಪೂರೈಸಬೇಕೆಂದು ನಿರ್ಬಂಧಿಸುವದು ಮತ್ತು ನುಚ್ಚನ್ನು ಬೇರ್ಪಡಿಸುವದರಿಂದಾಗುವ ಅಪವ್ಯಯ, ಸತ್ಯವಾಗಿದ್ದರೆ ನಿಶ್ಚಯವಾಗಿಯೂ ಮಹಾಪಾತಕವೇ ಸರಿ. ೧೯೪೩ ರ ದುರಂತವೇ ವಿಶಾಲತರ ಪ್ರಮಾಣದಲ್ಲಿ ಪುನರಾವರ್ತಿಸಬಾರದೆಂದಿದ್ದರೆ ಒಡನೆ ಈ ವಿಷಯದಲ್ಲಿ ಸೂಕ್ಷ್ಮವಾದ ವಿಚಾರಣೆ ಮತ್ತು ಕ್ರಿಯೆ ಅವಶ್ಯವಾಗಿದೆ.

**ಪುಣೆ, —ಪ್ಯಾರೇಲಾಲ**
**ಶನಿವಾರ, ೨೩-೨-೪೬**

## ತಿಳಿಗೇಡಿ ಹಿಂಸಾಕಾಂಡ

ಗಾಂಧೀಜಿಯವರು ಪತ್ರಿಕೆಗಳಿಗೆ ಹೀಗೊಂದು ಪ್ರಕಟನೆ ಕೊಟ್ಟದ್ದಾರೆ.

ಭಾರತದಲ್ಲಿ ಸದ್ಯಕ್ಕೆ ಸಂಭವಿಸುತ್ತಿರುವ ಸಂಗತಿಗಳನ್ನು ಖೇದದಿಂದ ನಿರೀಕ್ಷಿಸುತ್ತಿದ್ದೇನೆ. ನೌಕಾಪಡೆಯಲ್ಲಿಯ ದಂಗೆ ಮತ್ತು ತತ್ಪರಿಣಾಮವಾಗಿ ಸಂಭವಿಸುತ್ತಿರುವ ಇತರ ಘಟನೆ ಯಾವ ರೀತಿಯಲ್ಲಿಯೂ ಅಹಿಂಸಾತ್ಮಕವಿಲ್ಲ. 'ಜಯ ಹಿಂದ' ಅಥವಾ ಇಂಥದೆ ಬೇರೆ ಯಾವ ಜನಪ್ರಿಯ ಘೋಷವನ್ನು ಹೇಳಲು ಇತರರನ್ನು ಒತ್ತಾಯಪಡಿಸುವದೆಂದರೆ ಮೂಕ ಪ್ರಜಾಕೋಟಿಯ ಹಿತದೃಷ್ಟಿಯಲ್ಲಿ ಸ್ವರಾಜ್ಯದ ಶವದ ಪೆಟ್ಟಿಗೆಗೆ ಇನ್ನೊಂದು ಮೊಳೆಯನ್ನು ಜಡಿದಂತೆ ಟ್ರಾಮುಗಳನ್ನೂ ಇತರ ಆಸ್ತಿಗಳನ್ನೂ ಸುಲಿದು ಸುಡುವದು, ಯುರೋಪಿಯನರನ್ನು ಅಪಮಾನ ಅಪಾಯಗಳಿಗೀಡುಮಾಡುವದು ಕಾಂಗ್ರೆಸದ ಅಹಿಂಸೆ ಅಲ್ಲ, ನನ್ನ ಮಾದರಿಯ ಅಹಿಂಸೆಯಂತೂ ಕಾಂಗ್ರೆಸದ ಅಹಿಂಸೆಗಿಂತ ಬೇರೆಯಾಗಿದ್ದರೆ, ಮೊದಲೆ ಅಲ್ಲ. ಈ ತಿಳಿಗೇಡಿ ಅಹಿಂಸಾಕಾಂಡದ ಜ್ಞಾತಾಜ್ಞಾತ ಮುಖಂಡರು ತಮ್ಮ ಕೃತಿಯನ್ನು ಇನ್ನೊಮ್ಮೆ ಪರಿಶೀಲಿಸಿ ಮುಂದುವರೆಯಲಿ. ಕಾಂಗ್ರೆಸದ ಭಾರತವು ಅಹಿಂಸೆಯ ದೂರ್ಗದಿಂದ ಸ್ವರಾಜ್ಯ ಸಾಧಿಸಬೇಕೆಂದು ಜಗತ್ತಿಗೆ ಹೇಳಿ ತನ್ನ ಜೀವನದ ಇಂಥ ಪರೀಕ್ಷಾ ಸಮಯದಲ್ಲಿ ಆ ನುಡಿಯಂತೆ ನಡೆಯಲಿಲ್ಲ ಎನ್ನುವ ಅಪವಾದ ಬರದಿರಲಿ. 'ತಿಳಿಗೇಡಿ' ಎಂಬ ಶಬ್ದವನ್ನು ನಾನು ಬೇಕಾಗಿಯೆ ಉಪಯೋಗಿಸಿದ್ದೇನೆ. ಯಾಕಂದರೆ ವಿಚಾರಪೂರ್ಣ ಹಿಂಸಾಕೃತಿಯೂ ಇದೆ. ಈಗ ನಡೆದಿರುವದು ವಿಚಾರ ಪೂರ್ಣ ಘಟನೆಯಲ್ಲ. ನೌಕಾಪಡೆಯ ಹಿಂದೀಯರು ಅಹಿಂಸೆಯನ್ನರಿತು ಪ್ರಶಂಸಿಸಬಲ್ಲರಾದರೆ ಅವರು ಸಾಮೂಹಿಕವಾಗಿ ಹೂಡುವ ಅಹಿಂಸಾತ್ಮಕ ಪ್ರತಿಭಟನೆಯು ಗೌರವಪೂರ್ಣವಾಗುವವಲ್ಲದೆ ಪ್ರಬಲವೂ ಫಲಕಾರಿಯೂ ಆಗುವದು. ವ್ಯಕ್ತಿಗಂತೂ ಇದು ಸದೈವ ನಿಜವಾಗಿದೆ. ಅವರ ಸೇವೆಯು (ನೌಕರಿ) ಅವರಿಗಾಗಲಿ ಭಾರತಕ್ಕಾಗಲಿ ಅಪಮಾನಕರವಾಗಿದ್ದರೆ ಅವರು ಅಲ್ಲಿ ಉಳಿಯುವದಾದರೂ ಏಕೆ! ಇಂಥ ಕೃತಿಯನ್ನು ನಾನು ಅಹಿಂಸಾತ್ಮಕ ಅಸಹಕಾರವೆಂದು ಹೇಳಿದ್ದೇನೆ. ಆದರೆ ಅವರೀಗ ಕೆಟ್ಟ ಮಾದರಿಯನ್ನು, ಭಾರತಕ್ಕೆ ಒಗ್ಗದ ಉದಾಹರಣೆಯನ್ನು ಹಾಕಿಕೊಡುತ್ತಿದ್ದಾರೆ.

ಹಿಂಸೆಗಾಗಿ ಹಿಂದೂ-ಮುಸ್ಲಿಂ ಮತ್ತಿತರರಲ್ಲಿ ಉಂಟಾಗುವ ಐಕ್ಯ ದುರ್ವೃತ್ತಿ. ಭಾರತಕ್ಕೆ ಅದರಂತೆ ಜಗತ್ತಿಗೆ ಕೆಡುಕಾದ ಪರಸ್ಪರ ಹಿಂಸೆಗೆ ಅದು ಸಿದ್ಧತೆ ನಡೆಸಿ ಅತ್ತ ಎಳೆದೊಯ್ಯಬಹುದು.

ಭಾರತೀಯ ಆಡಳಿತೆಗೆ ಅನುಕೂಲವಾಗಿ ಬ್ರಿಟಿಶರು ಇಲ್ಲಿಂದ ಹೊರಟುಹೋಗುವದಾಗಿ ಹೇಳಿದ್ದಾರೆ. ಆದ್ದರಿಂದ ಎದೆಯಲ್ಲಿ ಹುದುಗಿದ್ದ ಅಶಾಂತಿಯನ್ನು ಈ ರೀತಿ ಪ್ರದರ್ಶಿಸಿ ಆಕಾರ್ಯಕ್ಕೆ ವಿಳಂಬ ಮಾಡದಿರೋಣ. ಅವರ ಸಾಮರ್ಥ್ಯ ಅಪಾರವಾಗಿದೆ. ಅವಶ್ಯವಿದ್ದಕ್ಕಿಂತ ಹೆಚ್ಚಿಗೆ ಅದನ್ನು ಉಪಯೋಗಿಸುವದು ಅಯೋಗ್ಯ. ಜನರನ್ನು ಹತ್ತಿಕ್ಕುವದಕ್ಕಾಗಿ ಅದರ ಉಪಯೋಗವಂತೂ ಕೆಟ್ಟದ್ದು. ಜನತೆಯು ದೀರ್ಘಾವಧಿಯಿಂದ ವಿದೇಶಿ ನೊಗದ ಕೆಳಗೆ ಬಳಲುತ್ತಿದೆ.

ಪುಣೆ
೨೩—೨—೪೬

## ಏಕಾಕಿಯಲ್ಲ

(ಅನೇ ಪುಟದಿಂದ ಮುಂದರಿದುದು)

ಇದನ್ನು ಕೈಕೊಳ್ಳಲಾಯಿತೇನು ? ಇತಿಹಾಸವನ್ನು ತಿಳಿದುಕೊಳ್ಳುವ ಪದ್ಧತಿ ಇದುವಲ್ಲ.

ಚೌರಿಚುರಾ ಘಟನೆಯಾದ ನಂತರ ನಾನು ಕೈಕೊಂಡ ಉಪಾಯವನ್ನು ಈಗ ಸಹ ಏಕೆ ಕೈಕೊಳ್ಳಬಾರದೆಂದು ನಾನು ನನ್ನನ್ನೇ ಕೇಳಿಕೊಳ್ಳುತಿದ್ದೇನೆ ಮತ್ತು ಪರರು ಸಹ ಕೇಳುತ್ತಿರುವರು. ಆದರೆ ನನಗೀಗ ಮನಸಿಲ್ಲ. ನನ್ನ ಆತ್ಮವು ಹಾಗೆ ಸೂಚಿಸಿದರೆ, ಪರಿಣಾಮಗಳನ್ನು ಲೆಕ್ಕಿಸದೆ ಹಾಗೆ ಮಾಡಬಲ್ಲೆ. ಇಂಗ್ಲೀಷ ಮನುಷ್ಯನನ್ನು ಮತ್ತು ಅದೇ ರೀತಿ ಹಿಂದೀಯನನ್ನು ನಾನು ತುಂಬ ಪ್ರೀತಿಸುತ್ತೇನೆಂದು ಇಲ್ಲಿ ಹೇಳಬಯಸುತ್ತೇನೆ. ಅವರಿಬ್ಬರೂ ಮಾನವರು. ಆದಾಗ್ಯೂ ಹಿಂದುಸ್ತಾನದಲ್ಲಿ ಜನತೆಗಾಗಿ ಜನತೆಯ ಆಡಳಿತೆ ಸ್ಥಾಪಿತವಾಗಬೇಕು. ಸ್ವರಾಜ್ಯ ನಮ್ಮ ಜನ್ಮಸಿದ್ಧ ಹಕ್ಕೆಂದು ಲೋಕಮಾನ್ಯರು ನಮಗೆ ಕಲಿಸಿರುತ್ತಾರೆ. ಆದರೆ ಮುಂಬೈ, ಕಲಕತ್ತಾ ಮತ್ತು ಕರಾಚಿ ನಗರಗಳಲ್ಲಿ ಈಗ ಸಂಭವಿಸುತಿರುವ ಘಟನೆಗಳಿಂದ ಆ ಸ್ವರಾಜ್ಯ ಪ್ರಾಪ್ತವಾಗಲಾರದು.

ಪ್ರತಿಯೊಬ್ಬ ಕಾಂಗ್ರೆಸ್ಸಿಗನು—ಅವನು ಕೇವಲ ನಾಲ್ಕಾಣೆ ಸದಸ್ಯನಿರಲಿ ಇಲ್ಲದಿರಲಿ- ಇದರಲ್ಲಿ ಕಾಂಗ್ರೆಸ್ಸಿನ ಸ್ಥಿತಿಯೇನೆಂಬುದನ್ನು ವಿಚಾರಿಸಬೇಕು. ನಾವು ಆತ್ಮವಂಚನೆ ಮಾಡಿಕೊಳ್ಳೋಣ ಬೇಡ; ಜಗತ್ತನ್ನೂ ವಂಚಿಸೋಣ ಬೇಡ.

ಪುಣೆ ಮೋ. ಕ. ಗಾಂಧಿ
೨೪-೨-೪೬

---

ಕಸ್ತೂರಬಾ ಗಾಂಧಿ ರಾಷ್ಟ್ರೀಯ ಸ್ಮಾರಕ ವಿಶ್ವಸ್ತ ಮಂಡಳದ ಅಧ್ಯಕ್ಷರಾದ ಮಹಾತ್ಮಾ ಗಾಂಧಿಯವರು ಬೇರೆ ಬೇರೆ ಪ್ರಾಂತಗಳಲ್ಲಿ ಈ ಕೆಳಗಿನ ಪ್ರತಿನಿಧಿಗಳನ್ನು ನೇಮಿಸಿದ್ದಾರೆ.

೧ ಆಂಧ್ರ— ಶ್ರೀಮತಿ ಜಿ. ದುರ್ಗಾಬಾಯಿ, ಮದ್ರಾಸ.
೨ ಆಸಾಮ— ಶ್ರೀಮತಿ ಅಮಲಪ್ರಭಾದಾಸ, ಗೌಹತಿ.
೩ ಬಂಗಾಲ— ಶ್ರೀಮತಿ ಲಾವಣ್ಯಲತಾ ಚಂದಾ, ಕಲಕತ್ತಾ.
೪ ಬಿಹಾರ— ಶ್ರೀಮತಿ ಪ್ರಿಯಂವದಾ ನಂದಕೇವಲಿಯಾರ, ಗಯಾ
೫ ಮಧ್ಯಪ್ರಾಂತ, ವರ್ಹಾಡ— ಶ್ರೀಮತಿ ತಾರಾಬೆನ ಮಶ್ರೂವಾಲಾ, ಆಕೋಲಾ.
೬ ಗುಜರಾತ— ಶ್ರೀಮತಿ ಸರಲಾಬೆನ ಸಾರಾಭಾಯಿ, ಅಹಮದಾಬಾದ.
೭ ಕರ್ನಾಟಕ— ಶ್ರೀಮತಿ ಉಮಾಬಾಯಿ ಕುಂದಾಪುರ, ಹುಬ್ಬಳ್ಳಿ.
೮ ಕೇರಳ— ಶ್ರೀಮತಿ ಮೀರಾ ಎಸ್. ಕೆ. ಜಾರ್ಜ, ತ್ರಿಚೂರ
೯ ಮಹಾಕೋಸಲ— ಶ್ರೀಮತಿ ದುರ್ಗಾಬಾಯಿ ಮಾಂಜರೇಕರ, ಛಿಂದವಾರಾ.
೧೦ ಮೈಸೂರ ಸಂಸ್ಥಾನ— ಶ್ರೀಮತಿ ಯಶೋಧರಾ ದಾಸಪ್ಪ, ಮೈಸೂರ.
೧೧ ಪಂಜಾಬ, ಕಾಶ್ಮೀರ— ಶ್ರೀಮತಿ ರಾಮೇಶ್ವರಿ ನೆಹರೂ, ಲಾಹೋರ.
೧೨ ರಜಪುತಾನಾ—ಶ್ರೀಮತಿ ರತ್ನದೇವಿ ಶಾಸ್ತ್ರಿ, ವನಸ್ಥಳಿ, ಜಯಪುರ.
೧೩ ಯುಕ್ತಪ್ರಾಂತ— ಶ್ರೀಮತಿ ಸುಚೇತಾದೇವಿ ಕೃಪಾಲಿನಿ, ಅಲಹಾಬಾದ.
೧೪ ಉತ್ಕಲ—ಶ್ರೀಮತಿ ರಮಾದೇವಿ ಚೌಧರಿ, ಬಾರಿ, ಕಟಕ.

ಇನ್ನು ಈ ಕೆಳಗಿನ ಪ್ರಾಂತಗಳಲ್ಲಿ ಪ್ರತಿನಿಧಿಗಳನ್ನು ನೇಮಿಸುವದಕ್ಕಾಗಿ ಪತ್ರವ್ಯವಹಾರ ನಡೆದಿದೆ.

೧) ದಿಲ್ಲಿ, ೨) ಸಿಂಧ, ೩) ಗಡಿನಾಡ ಪ್ರಾಂತ, ೪) ಮಧ್ಯಭಾರತ, ೫) ತಮಿಳನಾಡ, ೬) ಮಹಾರಾಷ್ಟ್ರ, ೭) ನಿಜಾಮ ಸಂಸ್ಥಾನ.

**ಕಸ್ತೂರಬಾ ಗಾಂಧಿ ರಾಷ್ಟ್ರೀಯ ಸ್ಮಾರಕ ವಿಶ್ವಸ್ತ ಮಂಡಳ [ಕೇಂದ್ರ ಕಚೇರಿ]**
**ಬಜಾಜವಾಡಿ, ವರ್ಧಾ ಸಹಿ- ಎ. ವಿ. ಠಕ್ಕರ**
**೨೦-೨-೧೯೪೬**

# ಹೊಲಸಿನಿಂದ ಚಿನ್ನ

ಹಳ್ಳಿಗರ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳುವ ಸಲುವಾಗಿ ಕಿಸಾನ ಜೀವನವನ್ನು ಬಾಳಲು ನಿರ್ಧರಿಸಿರುವ ನಾನು, ಗೊಬ್ಬರ ಮಾಡುವದು ನಾವು ತಿಳಿದುಕಬೇಕಾದ ಅತ್ಯಂತ ಮಹತ್ವದ ವಿಷಯಗಳಲ್ಲೊಂದೆಂದು ನಿಶ್ಚಿತವಾದ ನಿರ್ಣಯಕ್ಕೆ ಬಂದಿದ್ದೇನೆ. ಸೆಗಣಿ ಮತ್ತು ಕಸಕಡ್ಡಿಗಳನ್ನು ಒಂದು ರಾಶಿಮಾಡಿ ಒಟ್ಟಬಿಡುತ್ತಾರೆ ಹೊರತು ಅವುಗಳನ್ನು ಬೆರೆಸುವ ಪ್ರಯತ್ನವನ್ನೇ ಮಾಡುವದಿಲ್ಲ. ಈರಾಶಿ ಒಂದು ಹೊಂಡದಲ್ಲಿದ್ದರೂ ಇತ್ತು, ನೆಲದ ಮೇಲೇ ಇದ್ದರೂ ಇತ್ತೇ. ಮಳೆಗಾಲದಲ್ಲಿ ಅದನ್ನು ಮಳೆಗೆ ತೆರವು ಮಾಡಿಬಿಡುತ್ತಾರೆ. ಅದು ಅಲ್ಲಿ ಕೆಲವುಟ್ಟಿಗೆ ಕೊಳೆಯುತ್ತದೆ. ಆ ಮೇಲೆ ಅದನ್ನು ಹೊಲಗಳಲ್ಲಿ, ಅದೂ ಸಿಕ್ಕಸಿಕ್ಕ ಹಾಗೆ, ಚಲ್ಲುವರು. ಈ ಪ್ರಕಾರ ಕೈಲಿದ್ದ ವಸ್ತುಗಳಿಂದ ಅತ್ಯಂತ ಅಲ್ಪಪ್ರಯೋಜನವನ್ನು ಪಡೆಯಲಾಗುತ್ತದೆ.

ಹಳ್ಳಿಗಳಲ್ಲಿ ಗೊಬ್ಬರವಿಲ್ಲದಿರುವುದಕ್ಕೆ ಸೆಗಣಿಯನ್ನು ಹೆಚ್ಚಿನ ಅಂಶ ಕುರುಳುಮಾಡಿ ಸುಡುವದೇ ಕಾರಣವೆಂದು ಹೇಳುವದುಂಟು. ಆದರೆ ಕುರುಳಿನ ಪೂರೈಕೆ ಕಡಿಮೆಯಾಗದಂತೆಯೇ ಈಗಿನಕಿಂತ ಇಮ್ಮಡಿ ಸಗಣಿಯನ್ನು ಗೊಬ್ಬರಕ್ಕಾಗಿ ಕೂಡಹಾಕಬಹುದು. ಬಹಳ ಸೆಗಣಿ ಕಟ್ಟಿದ ದನಗಳ ಕಾಲಡಿಯಲ್ಲಿ ಸಿಕ್ಕು ಮಣ್ಣು ಮುಕ್ಕಿಬಿಡುತ್ತದೆ. ಇನ್ನೂ ಕೆಲವಂಶ ಹುಲ್ಲುಗಾವಲುಗಳಲ್ಲೇ ದಿಕ್ಕಿಲ್ಲದೆ ಬಿದ್ದಿರುತ್ತದೆ. ಇದನ್ನೆಲ್ಲ ಉಳಿಸಿದ್ದಾದರೆ, ಮತ್ತು ಮನೆಬಾಗಿಲು, ಓಣಿ ಸಂದಿಗಳಲ್ಲಿ ಅನಂತವಾಗಿ ಬಿದ್ದಿರುವ ಕಸಕಡ್ಡಿಗಳನ್ನು ಸರಿಯಾಗಿ ಕೂಡಿಸಿ ಸೆಗಣಿಯೊಂದಿಗೆ ಅದನ್ನು ಬೆರೆಸಿದರೆ ಈಗಿನಕಿಂತ ಇಮ್ಮಡಿ ಗೊಬ್ಬರವನ್ನು ಸಂಗ್ರಹಿಸಬಹುದು. ಅದರ ಗುಣವೂ ಎಷ್ಟೋ ಉತ್ತಮವಾಗಬಹುದು.

ಒಕ್ಕಲಿಗನ ಮನೆಬಾಗಿಲಲ್ಲೇ ಆಗಬಲ್ಲ ಈ ಗೊಬ್ಬರದ ಪ್ರಶ್ನೆಯನ್ನು ತುಡುಕುವದು ಕೃತಕ ಗೊಬ್ಬರಗಳ ಉತ್ಪಾದನೆಗಾಗಿ ದೊಡ್ಡ ಕಾರಖಾನೆಗಳನ್ನು ಕಟ್ಟುವದಕ್ಕಿಂತಲೂ ಅವಸರದ ಕೆಲಸ. ಕೃತಕ ಗೊಬ್ಬರದ ನಿರ್ಮಾಣಕ್ಕೆ ದೊಡ್ಡ ಪ್ರಮಾಣದ ಬಂಡವಳ, ಯಂತ್ರಮತ್ತು ತಜ್ಞರು ಬೇಕು. ಪ್ರಾರಂಭದಲ್ಲಿ ದೀರ್ಘಕಾಲದ ವರೆಗೆ ಅದು ನಮ್ಮ ಏಳು ಲಕ್ಷ ಹಳ್ಳಿಗಳಲ್ಲಿ ಕೆಲವಕ್ಕಷ್ಟೇ ತಲುಪಬಹುದು. ಅದರ ಉಪಯೋಗವೂ ಜಾಗರೂಕತೆಯಿಂದ ಆಗಬೇಕು. ಒಕ್ಕಲಿಗನ ಮನೆಬಾಗಿಲ ಗೊಬ್ಬರಕ್ಕೆ ಯಾವ ಬಗೆಯ ಬಂಡವಳವೂ ಬೇಕಾಗಿಲ್ಲ. ಅದಕ್ಕೆ ಬೇಕಾದ ವಸ್ತುಗಳು ಎತ್ತಿಕೊಳ್ಳುವರನ್ನೆ ಎದುರು ನೋಡುತ್ತ ಬಿದ್ದಿರುತ್ತವೆ. ಒಕ್ಕಲಿಗನು ತನ್ನ ಸಾಮಾನ್ಯ ಉಪಕರಣಗಳಿಂದ ಎಲ್ಲ ಕೆಲಸವನ್ನೂ ಮಾಡಬಲ್ಲ. ಮನೆಬಾಗಿಲ ಗೊಬ್ಬರವೇ ಸರ್ವವಿಧದಲ್ಲಿಯ ಉತ್ತಮ ಮತ್ತು ನಿರಪಾಯಿಯಾದುದೆಂದು ಜಗತ್ತಿನಲ್ಲಿ ಎಲ್ಲೆಲ್ಲಿಯೂ ಅಂಗೀಕೃತವಾಗಿದೆ.

ಕಿಸಾನ ಆಶ್ರಮದಲ್ಲಿ ನಾನು ಗೊಬ್ಬರ ಮಾಡುವದರಲ್ಲಿ ಅತ್ಯಂತ ಸರಳ ಪ್ರಯೋಗಗಳನ್ನು ಪ್ರಾರಂಭಿಸಿದ್ದೇನೆ. ನಾನಿನ್ನೂ ಪ್ರಾರಂಭದಶೆಯಲ್ಲಿಯೇ ಇರುವದರಿಂದ ಸರಿಯಾದ ಅಂಕೆಗಳನ್ನಾಗಲಿ ಕಾಲಮಾನವನ್ನಾಗಲಿ ಇಲ್ಲಿ ಕೊಡಲಾರೆ. ಆದರೆ ನಾನೀಗ ಪ್ರಯುತ್ನಿಸುತ್ತಿರುವ ಮಾರ್ಗ ಈ ಕೆಳಗಿನಂತಿದೆ. ೨ ಅಡಿ ಆಳ, ೨೨ ಅಡಿ ಉದ್ದ ೧೦ ಅಡಿ ಅಗಲದ ಕಣಿಯನ್ನು ತೋಡಬೇಕು. (ಕಣಿಯ ಉದ್ದಗಲವನ್ನು ಪ್ರತಿ ದಿನ ಸಂಗ್ರಹವಾಗುವ ಗೊಬ್ಬರವನ್ನು ಅವಲಂಬಿಸಿ ಹೆಚ್ಚುಕಡಿಮೆ ಮಾಡಬಹುದು.) ನಿತ್ಯವೂ ಹುಲ್ಲು ಎಲ್ಲೆ, ಮತ್ತು ಇತರ ಹಗುರು ಕಸಕಡ್ಡಿಗಳನ್ನು ಕಣಿಯ ಸಮೀಪದಲ್ಲಿ ಒಟ್ಟಬೇಕು ಸೆಗಣಿ ಮತ್ತು ಕುದುರೆ ಲದ್ದಿಯನ್ನು ಕೂಡಿಸಿ ಕಸದ ರಾಶಿಯ ಸಮೀಪದಲ್ಲಿ ಬೇರೆಯೆ ರಾಶಿ ಮಾಡಬೇಕು. ಸಂಜೆಗೆ ಕಣಿಯ ನೆಲದ ಸುಮಾರು ಅರ್ಧಾಂಶಕ್ಕೆ ಕಸಕಡ್ಡಿಗಳನ್ನು ತೆಳ್ಳಗೆ ಬಿಡಿಸಬೇಕು. ಅದರ ಮೇಲೆ ಸೆಗಣಿಯನ್ನು ಕೊಚ್ಚಿ ಕೈಯಿಂದ ಹಬ್ಬಿಸಬೇಕು. ಹೀಗೆ ಒಂದರಮೇಲೊಂದು ಪದರು ಹಬ್ಬಿಸುತ್ತ ಹೋಗಬೇಕು. ಎಲ್ಲಕ್ಕೂ ಮೇಲಿನ ಪದರು ಕಸಕಡ್ಡಿಯದೇ ಇರಬೇಕು. ಇದರಿಂದ ಸೆಗಣಿಯನ್ನು ಬಿಸಿಲು ಗಾಳಿಗಳಿಂದ ಮರೆಮಾಡಿದಂತಾಗುತ್ತದೆ. ಪ್ರತಿ ಮೂರು ದಿನಕ್ಕೊಮ್ಮೆ ಅದನ್ನು ನೆನಸುವಷ್ಟು ನೀರು ಹೊಯ್ಯಬೇಕು. ಈ ಅರ್ಧ ಕಣಿ ತುಂಬಿದೊಡನೆ ಗೊಬ್ಬರವನ್ನು ತೆಳ್ಳನ್ನ ಮಣ್ಣ ಪದರಿನಿಂದ ಮುಚ್ಚಿ ಆರೆಂಟು ವಾರಗಳ ವರೆಗೆ ಹಾಗೆಯೆ ಬಿಡಬೇಕು. ಅನಂತರ ಅದನ್ನು ಕಣಿಯ ಇನ್ನೊಂದು ಅರ್ಧಕ್ಕೆ ಎಳೆಯಬೇಕು. ಈ ಪದರುಗಳನ್ನು ಮೇಲಿಂದ ಕೆಳಗೆ ತೆಳ್ಳಗೆ ಜಾಗರೂಕತೆಯಿಂದ ಕೊಚ್ಚಬೇಕು. ಹೀಗೆ ಕಣಿಯ ಇನ್ನೊಂದರ್ಧದಲ್ಲಿ ಗೊಬ್ಬರವನ್ನು ಕೂಡ ಹಾಕಿದ ಮೇಲೆ ಅದನ್ನು ನೀರಿನಿಂದ ನೆನಸಿ ಮತ್ತೆ ಮಣ್ಣಿನಿಂದ ಮುಚ್ಚಿ ಬಿಡಲಾಗುವದು. ಮತ್ತೆ ಆರೆಂಟು ವಾರಗಳಲ್ಲಿ ಪುನಃ ಆ ಗೊಬ್ಬರವನ್ನು ಪರೀಕ್ಷಿಸಬೇಕು. ಅದು ಸಾಕಷ್ಟು ಕೊಳೆತಿದ್ದರೆ ಅದನ್ನು ತಗ್ಗಿನಿಂದ ಎತ್ತಿ ನೆಲದ ಮೇಲೆ ಒಟ್ಟಿ ಮಣ್ಣಿನಿಂದ ಮುಚ್ಚಿಟ್ಟು ಬೇಕಾದಾಗ ಬಳಸಿಕೊಳ್ಳಬಹುದು. ಸಾಕಷ್ಟು ಕೊಳೆತಿರದಿದ್ದರೆ ಪುನಃ ಮೊದಲಿನಂತೆಯೆ ಕಣಿಯಲ್ಲಿ ಹರಡಬೇಕು. ಮಳೆಯ ಸಮಯಕ್ಕೆ ಅದರ ಮೇಲೊಂದು ಚಪ್ಪರ ಹಾಕಬೇಕು.

ಈಗಿನ ಅಶಿಕ್ಷಿತ ಮಾನಸಿಕ ಸ್ಥಿತಿಯಲ್ಲಿ ಒಕ್ಕಲಿಗನನ್ನು ಇಷ್ಟು ಮಾಡಲು ಮನವೊಲಿಸುವದೇ ದೊಡ್ಡ ಕಷ್ಟ. ಇದಕ್ಕಿಂತ ಹೆಚ್ಚು ತೊಡಕಿನದಾದರೆ ಯೋಜನೆ ಬಿದ್ದುಹೋದೀತು. ಆದರೆ ಈ ಪದ್ಧತಿ ಬಹಳ ಉಪಯುಕ್ತವಾಗುವದೆಂದು ಆಶೆ ಇದೆ.

ಈ ಬಗೆಯ ಕೆಲಸದ ಪೂರ್ಣ ಅಂಕೆ ಸಂಖ್ಯೆಗಳನ್ನು ದೊರಕಿಸಬೇಕಾದರೆ ಉತ್ಪಾದನೆಯಲ್ಲಿ ವಿವಿಧ ಪ್ರಯೋಗಗಳನ್ನು ಮಾಡಿನೋಡಬೇಕು. ಮತ್ತು ಎರಡು ಮೂರು ವರ್ಷದ ಬೆಳೆಯ ಪರಿಣಾಮವನ್ನು ನಿರೀಕ್ಷಿಸಬೇಕು. ಆದರೆ ನಾನು ಈ ಅಂಕೆ ಸಂಖ್ಯೆಗಳಿಗಾಗಿ ಕಾಯದೆ ಈ ವಿಷಯವನ್ನು ಪ್ರಕಟಿಸಿದ್ದೇನೆ. ಏಕೆಂದರೆ ಇಂಥ ಕೆಲಸದಲ್ಲಿ ಆಸಕ್ತಿಯುಳ್ಳ ನಾವೆಲ್ಲರೂ ನಮ್ಮ ಪ್ರಯತ್ನಗಳಲ್ಲಿ ಪರಸ್ಪರ ಸಹಕರಿಸಿ ವಿಚಾರ ವಿನಿಮಯಗಳನ್ನು ಮಾಡಿಕೊಳ್ಳುವದವಶ್ಯ. ಪರಿಣಾಮಗಳ ವರದಿ ಹೊಸ ಪ್ರಾಂತಿಕ ಸರಕಾರಗಳು ಕಾರ್ಯಾರಂಭ ಮಾಡಿದೊಡನೆಯೆ ಅವುಗಳ ಒಕ್ಕಲತನ ಖಾತೆಗಳು ತಡಮಾಡದೆ ಕೈಗೆ ತೆಗೆದುಕೊಳ್ಳಬೇಕಾದ ವಿಷಯವಿದು. ಆಗ ನಮ್ಮ ಸರಳ, ವ್ಯವಹಾರ್ಯ ಪದ್ಧತಿಗಳನ್ನು ಅವರ ಮುಂದಿರಿಸಿ ಸಹಾಯ ಮಾಡುವದು ನಮ್ಮ ಕರ್ತವ್ಯ.

ಚೀನದಲ್ಲಿ ಗೊಬ್ಬರಮಾಡುವ ಸುಲಭ ದೇಶಿ ಪದ್ಧತಿಯನ್ನು ಕುರಿತು ಓದುತ್ತೇವೆ. ಅಲ್ಲಿ ಈ ಕಲೆಯನ್ನು ಅನಾದಿಯಿಂದಲೂ ಪ್ರಯೋಗ ಮಾಡಿದಂತೆ ತೋರುತ್ತದೆ. ತನ್ನ ಭೂಮಿಯಿಂದ ಚೀನೀ ಒಕ್ಕಲಿಗನು ಹಿಂದೀ ಒಕ್ಕಲಿಗನಿಗಿಂತ ನಾಲ್ಕು ಪಾಲು ಹುಟ್ಟುವಳಿಯನ್ನು ತೆಗೆಯುತ್ತಾನೆಂದೂ ನಾವು ಓದುತ್ತೇವೆ. ಚೀನದಲ್ಲಿ ಹಳ್ಳಿಗಳು ಸ್ವಚ್ಛವಾಗಿರುತ್ತವೆ. ಏಕೆಂದರೆ ಕಸಕಡ್ಡಿಯೆಂಬುದನ್ನೆಲ್ಲ ಬಳಿದು ಗೊಬ್ಬರ ಗುಂಡಿಗಳಿಗೆ ಸಾಗಿಸಲಾಗುತ್ತದೆ. ಇಲ್ಲಿ ಹಿಂದುಸ್ತಾನದಲ್ಲಿ ನಮ್ಮ ಹಳ್ಳಿಗಳಲ್ಲಿ ವರ್ಷಾದ್ಯಂತವೂ ಹೊಲಸು ರಾಶಿ ಏರುತ್ತ ಬಿದ್ದಿರುವದು ಈ ಎಲ್ಲ ಹೊಲಸನ್ನು ಚಿನ್ನವಾಗಿ ಮಾರ್ಪಡಿಸುವದು ಸಾಧ್ಯವುಂಟು— ಮಾತ್ರ ಅದನ್ನು ನಾವು ಸರಿಯಾದ ರೀತಿಯಲ್ಲಿ ಉಪಯೋಗಿಸಿಕೊಳ್ಳಬೇಕು.

ಕಿಸಾನ ಅಶ್ರಮ —ಮೀರಾ ಬೆನ್

೧೪-೨-೪೬

# ಕೊನೆಯ ಹಂತದಲ್ಲಿ

ಬರಗಾಲವು ನಮ್ಮ ಮುಂದೆ ಧುತ್ತೆಂದು ಬಂದು ನಿಂತಿದೆ. ಉಪವಾಸಕ್ಕೀಳಿಸುವ ಕೊನೆಯ ಹಂತವಿದೆಂದು ಹಳ್ಳಿಗರು ತಿಳಿದಿದ್ದಾರೆ. ಇದೊಂದು ಹಂತವನ್ನಿಳಿದರೆ ಅವರು ತಳಕಾಣುವರು.

ಸಮೀಪದಲ್ಲಿರುವ ಒಂದು ಹರಿಜನ ಹಳ್ಳಿಗೆ ನಾನು ಕೆಲವು ದಿನಗಳ ಹಿಂದೆ ಹೋದುದರ ಅನುಭವವನ್ನು ಇಲ್ಲಿ ವಿವರಿಸುವೆ:

ನದಿಯ ನೆರೆಹಾವಳಿಯನ್ನು ಪರಿಶೀಲಿಸಲು ನಾನು ಅಲ್ಲಿಗೆ ಬಂಡಿಯಲ್ಲಿ ಹೋಗಬೇಕಾಯಿತು. ಮುಂಜಾವಿನ ಸಮಯ; ಎಲ್ಲವೂ ಮಂಜಿನಿಂದ ಮುಸುಕಿತ್ತು. ನಾನು ಬೆಚ್ಚನೆಯ ಕೋಟು ಧರಿಸಿ ತಲೆಗೆ ಉಣ್ಣೆಯ ಮಫಲರ ಕಟ್ಟಿಕೊಳ್ಳಬೇಕಾಯಿತು. ೧॥ ಮೈಲು ಹೋದ ನಂತರ ಮಣ್ಣು ಮತ್ತು ಹುಲ್ಲಿನ ಗುಡಿಸಲುಗಳ ಆ ಹಳ್ಳಿ ಬಂದಿತು. ದನಗಳು ಹೊರಗೆ ನಿಂತಿದ್ದವು. ಅಲ್ಲಿಯ ಆಕಳು ಮತ್ತು ಎತ್ತುಗಳು ನಮ್ಮ ಆಶ್ರಮದ ಒಂದು ವರ್ಷದ ಕರುಗಳಷ್ಟು ಎತ್ತರವಿದ್ದವು; ಡೊಕ್ಕೆ ಎಲಬುಗಳು ತೆರೆದಿದ್ದವು. ದಣಿದ ಮತ್ತು ನಿಸ್ತೇಜ ಕಣ್ಣುಗಳಿಂದ ನನ್ನನ್ನು ನೋಡುತ್ತಿದ್ದವು. ಈ ದೃಶ್ಯವನ್ನು ನೋಡಿದ ಕೂಡಲೇ "ಎಂಥ ಕ್ರೂರರು ನೀವು ? ದನಗಳನ್ನು ಚೆನ್ನಾಗಿ ಮೇಯಿಸುವದಿಲ್ಲವಲ್ಲ ?" ಎಂಬ ಪ್ರಶ್ನೆ ತಾನ್ನಷ್ಟಕ್ಕೆ ತಾನೇ ಹೊರಬರುತ್ತದೆ. ಆದರೆ ಅಲ್ಲಿರುವ ಜನರನ್ನೂ ಸ್ವಲ್ಪ ನೋಡಿರಿ. ಅವರಾದರೂ ಚನ್ನಾಗಿರುವರೋ ? ದನಗಳಂತೆ ಅವರ ಕಣ್ಣುಗಳೂ ಕಾಂತಿವಿಹೀನವಾಗಿರುವವು ಮತ್ತು ಎಲಬುಗಳು ಹೊರಬಂದಿರುತ್ತವೆ. ಒಂದು ದೃಷ್ಟಿಯಿಂದ ಅವರು ದನಗಳಿಗಿಂತಲೂ ದುರ್ದೈವಿಗಳು. ಯಾಕಂದರೆ ಚಳಿಯಿಂದ ಕಾಪಾಡಿಕೊಳ್ಳಲು ದೇವರು ದನಗಳಿಗೆ ಮೈಮೇಲೆ ಕೂದಲು ಕೊಟ್ಟಿರುತ್ತಾನೆ; ಮನುಷ್ಯರಿಗೆ ಇಲ್ಲ. ಅವರು ಹರಕು ಬಟ್ಟೆಯಿಂದ ಜೀವನ ಹಾಕಬೇಕು.

ಮಹಿಳೆಯರು ಅಡಿಗೆ ಮಾಡುವ ದೃಶ್ಯವನ್ನು ನೋಡಿರಿ:

"ಏನು ಅಡಿಗೆಮಾಡುವಿಯೆಂಬದನ್ನು ತೋರಿಸುವಿಯಾ ?" ನಾನು ಕೇಳಿದೆ. ಆಗ ಓರ್ವ ಸ್ತ್ರೀ ಒಂದು ಜೋಳದ ರೊಟ್ಟಿ ಮತ್ತು ಸಾಸಿವೆ ತೊಪ್ಪಲದ ಪಲ್ಲೆಯನ್ನು ತಂದು ತೋರಿಸಿದಳು. ಆ ಸೊಪ್ಪನ್ನು ಅವಳು ಹೊಲದಿಂದ ತಂದಿದ್ದಳು.

"ಬೇಳೆ ಇಲ್ಲವೇ ?" ನಾನು ವಿಚಾರಿಸಿದೆ. "ಅಲ್ಲಿರುವದೇನು ?"

"ಬೇಳೆ ಕೊಳ್ಳುವಷ್ಟು ಸಾಮರ್ಥ್ಯವಿದ್ದಿದ್ದರೆ ನಾನೂ ನಿಮ್ಮಂತೆ ಜಾಕೀಟಿನಿಂದ ಮೈ ಮುಚ್ಚಿಕೊಳ್ಳುತಿದ್ದೆ" ಎಂದು ಅವಳು ತಾನು ಧರಿಸಿದ ಹರುಕು ಆದರೆ ಅಲ್ಲಲ್ಲಿ ವ್ಯರ್ಥವಾಗಿ ಹೊಲಿದ ಬಟ್ಟೆಯನ್ನು ತೋರಿಸಿ ಉದ್ಗಾರ ತೆಗೆದಳು.

"ನಿಮಗೆ ಬೇಳೆ ಸಿಗುವದಿಲ್ಲೆಂದು ನಿಮ್ಮ ಅಭಿಪ್ರಾಯವೊ?" ನಾನು ಪುನಃ ಕೇಳಿದೆ.

ಬಳಿಯಲ್ಲಿದ್ದ ಒಬ್ಬನು ಉತ್ತರಿಸಿದ:

"ವಿಶೇಷ ಅತಿಥಿಗಳು ಬಂದಾಗ ಅಥವಾ ಹಬ್ಬಗಳಲ್ಲಿ ಒಂದು ಆಡು ಅಥವಾ ಕರು ಇಲ್ಲವೆ ಬೇರನ್ನೇನಾದರೂ ಮಾರಾಟ ಮಾಡಿ ಸ್ವಲ್ಪ ಬೇಳೆ ದೊರಕಿಸುತ್ತೇವೆ.'"

"ಹೀಗೋ? ಹಾಗಾದರೆ ಹಾಲಿನ ವಿಷಯವೇನು?"

"ಅದಾವುದೂ ಇಲ್ಲ."

"ತುಪ್ಪ?"

"ಅದೂ ಇಲ್ಲ."

"ಎಣ್ಣೆಯನ್ನಾದರೂ ಉಪಯೋಗಿಸುವದಿಲ್ಲವೇ?"

"ಅದೂ ಇಲ್ಲ."

ಆ ನಂತರ ನಾನು ಮಸಾಲೆ ಹಾಗೂ ಇತರ ಪದಾರ್ಥಗಳ ಬಗ್ಗೆ ಕೇಳಿದೆ.

ಉಪ್ಪನ್ನು ಉಪಯೋಗಿಸುವದಾಗಿ ಉತ್ತರವಿತ್ತರು. ಕಂಟಿಗಳಲ್ಲಿ ಬೆಳೆದ ಹುಲ್ಲನ್ನು ಕೊಯ್ದು ಪೇಟೆಯಲ್ಲಿ ಮಾರಿ ನೆರೆಯ ಹಳ್ಳಿಯಿಂದ ಉಪ್ಪನ್ನು ತರುತ್ತೇವೆ. ಹಣ ಮಿಕ್ಕಿ ಉಳಿದಾಗ ಸ್ವಲ್ಪ ಮೆಣಸಿನಕಾಯಿಯನ್ನೂ ಕೊಳ್ಳುತ್ತೇವೆ ಎಂದರು.

ಇಂಥ ಜನರಿಗೆ ಕೊಡುತ್ತಿರುವ ಆಹಾರವನ್ನು ಇನ್ನೂ ಕಡಿಮೆ ಮಾಡಿದರೆ, ಅವರ ಅಂತ್ಯಕಾಲ ಬಂತೆಂದು ತಿಳಿಯಬೇಕು. ಮನೆಗಳಲ್ಲಿ ಸಂಗ್ರಹವಿಲ್ಲ; ದೇಹದಲ್ಲಿ ಶಕ್ತಿ ಇಲ್ಲ ಸಾಮಾನ್ಯವಾಗಿ ಅವರೆಲ್ಲರೂ ಭೂಮಿ ಇಲ್ಲದ ರೈತರು. ಎಲ್ಲರೂ ನಿರಕ್ಷರಿಗಳು. ಇಂಥ ಲಕ್ಷಾಂತರ ಜನರು ಹಿಂದುಸ್ತಾನದ ತುಂಬ ಇದ್ದಾರೆ.

ಈ ಚಿತ್ರದಲ್ಲಿ ಹೊಸದೇನೂ ಇಲ್ಲವೆಂಬದು ನನಗೆ ಗೊತ್ತಿದೆ. ಇಂಥ ಪರಿಸ್ಥಿತಿ ಇದೆಯೆಂದು ಸರ್ವರಿಗೂ ಗೊತ್ತು. ಆದರೆ ಶ್ರೀಮಂತರ ಹೃದಯದಲ್ಲಿ ಇದು ಪ್ರವೇಶಿಸಿಲ್ಲ. ಪ್ರವೇಶಿಸಿದ್ದರೆ ಅವರು ಸಹ ಈ ದೀನರಂತೆ ಹರಕು ಬಟ್ಟೆ ತೊಟ್ಟು ಅರೆಹೊಟ್ಟೆಯಿಂದ ಜೀವಿಸುತ್ತಿದ್ದರು.

ಬರಗಾಲದ ಬಿಸಿ ಹತ್ತಿದ ಕೂಡಲೇ ನಗರದ ಜನರು ಸರಕಾರಿ ಅಧಿಕಾರಿಗಳಿಗೆ ಎಚ್ಚರವಾಗುವಂತೆ ಕೂಗುತ್ತಾರೆ. ಈ ಜನರು ಮೂಕರಂತೆ ಬಂದ ಕಷ್ಟವನ್ನು ಸಹಿಸುತ್ತಾರೆ.

ಬರಗಾಲ ನಿವಾರಣೆ ಅಧಿಕಾರಿಗಳು ಪರಿಸ್ಥಿತಿ ಕೈಮೀರುವ ಮೊದಲೇ ಈ ಜನರ ಕಡೆಗೆ ಲಕ್ಷ ಕೊಡುವರೇ ?

ಈ ಜನರನ್ನು ಪುನರುಜ್ಜೀವಿಸಿ ತಮ್ಮ ಕಾಲ ಮೇಲೆ ತಾವು ನಿಲ್ಲುವಂತೆ ಮಾಡುವದು ಮುಂಬರುವ ಹೊಣೆಗಾರ ಸರಕಾರದ ಪ್ರಥಮದ ಕರ್ತವ್ಯವಾಗಿದೆ.

ಕಿಸಾನ ಆಶ್ರಮ —ಮೀರಾ ಬೆನ್

೧೭-೨-೪೬

# ಪ್ರಾರ್ಥನೆಯಲ್ಲಿ ಶಿಸ್ತು

ಮದ್ರಾಸಿನಲ್ಲಿದ್ದಾಗ ಗಾಂಧೀಜಿಯವರು ಸಾರ್ವಜನಿಕ ಕಾರ್ಯಕ್ರಮವಾವುದನ್ನೂ—ಹರಿಜನ ಔದ್ಯೋಗಿಕ ಶಾಲೆಗೆ ಸಂಬಂಧಿಸಿದ ಕಾರ್ಯಕ್ರಮವೊಂದನ್ನು ಬಿಟ್ಟರೆ ಸ್ವೀಕರಿಸಿದ್ದಿಲ್ಲ. ಸಾಮೂಹಿಕ ಪ್ರಾರ್ಥನೆಯೆ ಸಾರ್ವಜನಿಕ ಕಾರ್ಯಕ್ರಮವಾಗಿತ್ತು. ಜನಜಂಗುಳಿಯ ವರ್ತನೆಯನ್ನು ಅಭ್ಯಸಿಸಲು ಗಾಂಧೀಜಿಯವರಿಗೆ ರೇಲ್ವೆ ಪ್ರಯಾಣವು ಹೇಗೆ ಅವಕಾಶ ಕಲ್ಪಿಸಿಕೊಟ್ಟಿತ್ತೊ ಹಾಗೆಯೆ ಪ್ರಾರ್ಥನಾ ಸಮೂಹಗಳು ಕೂಡ ಜನಜಂಗುಳಿಗೆ ಶಿಸ್ತನ್ನು ಕಲಿಸಿಕೊಡಲು ಮಹಾತ್ಮರಿಗೆ ಸಂ[illegible] ಒದಗಿಸಿತು. ಸ್ವರಾಜ್ಯವನ್ನು ಹಿಂದುಸ್ತಾನವು ಹಿಂಸೆ ಇಲ್ಲವೆ ಅಹಿಂಸೆ ಈ ಎರಡರಲ್ಲಿ ಒಂದು ಮಾರ್ಗದಿಂದ ಸಂಪಾದಿಸಿದರೂ ಪ್ರತಿಯೊಂದು ಸಂದರ್ಭದಲ್ಲಿಯೂ ಶಿಸ್ತು ಅವಶ್ಯ. ಸೈನ್ಯದ ದೃಷ್ಟಾಂತವನ್ನು ತೆಗೆದುಕೊಂಡರೆ ಶತ್ರುವನ್ನು ಕೊಲ್ಲಲು ಶಸ್ತ್ರಾಸ್ತ್ರಗಳನ್ನು ಹಿಡಿಯುವ ವಿಧಾನವನ್ನು ಕಲಿಯುವದಕ್ಕೆ ಶಿಸ್ತು ಎನ್ನುತ್ತಾರೆ ಎಂದು ಮಹಾತ್ಮರು ವಿವರಿಸಿದರು. ಆದರೆ ಅಹಿಂಸೆಯ ಮಾತು ಹಾಗಲ್ಲ. ಈ ಪ್ರಸಂಗದಲ್ಲಿ ಎಂಥಾ ಸಿಟ್ಟಿನ ಭರದಲ್ಲಿಯಾದರೂ ಮುಯ್ಯ ತೀರಿಸುವ ಇಲ್ಲವೆ ಕೊಲ್ಲುವ ಹವ್ಯಾಸಕ್ಕೆ ಹೋಗದೆ ಮರಣ ಕಲೆಯನ್ನು ಚೆನ್ನಾಗಿ ಅರಿತುಕೊಳ್ಳುವದೇ ಶಿಸ್ತು ಎನಿಸುತ್ತದೆ. ೪೦ ಕೋಟಿ ಜನರೂ ನಡೆ ನುಡಿ ಹಾಗು ಕೃತಿಗಳಲ್ಲಿ ಒಂದಾದರೆ ಸ್ವಾತಂತ್ರ್ಯವು ಅವರದೇ ಆಗುವದರಲ್ಲಿ ಸಂದೇಹವಿಲ್ಲ. ಮಾನವ ಕುಲದ ಐಕ್ಯ ಸಾಧಿಸುವ ಶಕ್ತಿ ಪ್ರಾರ್ಥನೆಯಲ್ಲಿದೆ. ಪ್ರಾರ್ಥನೆಯ ಮೂಲಕ ಒಬ್ಬನು ಪರಮಾತ್ಮನೊಡನೆ ತಾದಾತ್ಮ್ಯ ಹೊಂದಿದರೆ ಅವನು ಎಲ್ಲರನ್ನೂ ತನ್ನಂತೆ ಕಾಣುವನು. ಒಬ್ಬರು ಮೇಲೆ, ಇನ್ನೊಬ್ಬರು ಕೆಳಗೆ ಎಂದು ಅವನಿಗನಿಸುವದಿಲ್ಲ. ಪ್ರಾರ್ಥನೆಯಿಂದ ಇಲ್ಲವೆ, ಆಂಧ್ರ, ತಮಿಳ, ಕನ್ನಡಿಗ ಹಾಗು ಮಲಯಾಳಿಗಳಲ್ಲಿ ಭಾಷೆಯ ಬಗ್ಗೆ ಕಂಡುಬರುವ ಚಿಲ್ಲರೆ ತಿಕ್ಕಾಟಗಳು ಆಗ ಮಾಯವಾಗುವವು. ಸ್ಪೃಶ್ಯಾಸ್ಪೃಶ್ಯರಲ್ಲಿ, ಹಿಂದು ಮುಸ್ಲಿಂರಲ್ಲಿ, ಪಾರ್ಸಿ ಕ್ರಿಶ್ಚಿಯನ ಅಥವಾ ಸೀಖರಲ್ಲಿ ಯಾವ ಭೇದಭಾವವೂ ಕಂಡುಬರುವದಿಲ್ಲ. ಅದರಂತೆ ಸ್ವಾರ್ಥಸಾಧನೆಗಾಗಿ ಯಾರೂ ಪ್ರಯತ್ನಿಸುವದಿಲ್ಲ. ಬೇರೆ ಬೇರೆ ಪಕ್ಷಪಂಗಡಗಳಲ್ಲಿ ಇಲ್ಲವೆ ಯಾವದೇ ಪಕ್ಷದಲ್ಲಿಯ ಸದಸ್ಯರಲ್ಲಿ ಅಧಿಕಾರಲಾಲಸೆಯಿರುವದಿಲ್ಲ.

ಬಾಹ್ಯಾಂಗವು ಅಂತರಂಗದ ಪ್ರತಿಬಿಂಬವಾಗಿರಬೇಕು. ನೀವು ಪರಮಾತ್ಮನ ಧ್ಯಾನದಲ್ಲಿ ಮಗ್ನರಾದರೆ ಜನಜಾತ್ರೆಯು ಎಷ್ಟೇ ಇರಲಿ ಪ್ರಶಾಂತ ವಾತಾವರಣ ನೆಲೆದೋರುವದು. ಎಲ್ಲಕ್ಕೂ ಹೆಚ್ಚಿನದೆಂದರೆ ಪರಮಾತ್ಮನ ಸಾಕ್ಷಾತ್ಕಾರವು ಪಾರ್ಥಿವ ಭೀತಿಯನ್ನು ನೀಗಿಸಬೇಕು. ಪರಮಾತ್ಮನ ಸ್ವಾಮಿತ್ವದ ಅಂಗೀಕಾರದೊಡನೆ ರಾಜಕೀಯ ಗುಲಾಮಗಿರಿಯು ಹೋದಿಕೆಯಾಗುವದು. ಗುಲಾಮನಿಗೆ ಮುಕ್ತಿಯಲ್ಲಿಯದು?

ಪ್ರಾರ್ಥನಾಸಮೂಹಗಳಲ್ಲಿ ಮೊದಮೊದಲು ಗದ್ದಲ ವಿಶೇಷವಿರುತ್ತಿತ್ತು. ಕಾರಣ ಸಂಸ್ಕೃತ ಶ್ಲೋಕಗಳ ಹಾಗು ಕುರಾಣ ಝೆಂಡ ಅವೆಸ್ತಾಗಳ ಪಠಣವನ್ನು ನಿಲ್ಲಿಸಲಾಗಿತ್ತು. ಆದರೆ ಶಾಂತತೆಯನ್ನು ತಾಳುವದರಲ್ಲಿಯೂ ಶಿಸ್ತನ್ನು ಪರಿಪಾಲಿಸುವದರಲ್ಲಿಯೂ ಜನರು ಸುಧಾರಿಸಿದ್ದುದು ಕೊನೆಕೊನೆಗೆ ಕಂಡು ಬಂತು. ಜನಜಂಗುಳಿಯು ಎಷ್ಟೆ ಶಿಸ್ತುಗೆಟ್ಟದ್ದಾಗಿದ್ದರೂ ನೀವು ಸಾಕಷ್ಟು ಶ್ರದ್ಧಾಳುಗಳೂ ಪ್ರಯತ್ನಶೀಲರೂ ಸಹನಶೀಲರೂ ಆಗಿದ್ದರೆ ನೀವು ಮಾಡುವ ಉದಾತ್ತ ವಿನಂತಿಯನ್ನು ಜನರು ಮನ್ನಿಸುವದರಲ್ಲಿ ಸಂಶಯವಿಲ್ಲ.

ಪುಣೆ —ಪ್ಯಾರೇಲಾಲ

ಶನಿವಾರ ೨೩-೨-೪೬

## ಪ್ರಶ್ನೆ—ಪೆಟ್ಟಿಗೆ

ಪ್ರ:- ಮದುಮಕ್ಕಳಲ್ಲಿ ಒಬ್ಬರು ಹರಿಜನರಿರಬೇಕೆಂದು ನೀವು ಹೇಳುವಿರಿ ಆದರೆ ಉಳಿದ ಮದುವೆಗಳು ನಿಷಿದ್ಧವೆಂದು ನೀವು ಕರೆಯುವದಿಲ್ಲವೆಂದು ಆಶಿಸುತ್ತೇನೆ.

ಉ:— ಇದು ಯೋಗ್ಯ ಪ್ರಶ್ನೆ. ಎಲ್ಲ ಮದುವೆಗಳೂ ನಿಷಿದ್ಧವೆಂದು ನಾನು ನಂಬುವದಿಲ್ಲ. ನಾನು ಆದರ್ಶವನ್ನು ಮಾತ್ರ ತೋರಿಸಿದ್ದೇನೆ. ಅದನ್ನು ಸಾಧ್ಯವಿದ್ದಷ್ಟು ಬೇಗ ಸಾಧಿಸುವಂತೆ ಪ್ರಯತ್ನಿಸುವದು ನಮ್ಮ ಕರ್ತವ್ಯ.

# ಕರ್ನಾಟಕ

## ಧಾರವಾಡ

ಹುಬ್ಬಳ್ಳಿ ಜವಳಿ ಮತ್ತು ಅರಿವೆ ವ್ಯಾಪಾರಸ್ಥರ ಸಂಘದ ವಿಶೇಷ ಸಾಧಾರಣ ಸಭೆಯು ತಾ. ೨೦ ಕ್ಕೆ ಶ್ರೀ ವಸಿಚಂದರ ಅಧ್ಯಕ್ಷತೆಯಲ್ಲಿ ಕೂಡಿ ಶಾಸನಸಭಾ ಚುನಾವಣೆಯಲ್ಲಿ ಕಾಂಗ್ರೆಸ ಹುರಿಯಾಳುಗಳಿಗೆ ಮತ ಕೊಡಬೇಕೆಂದು ನಿರ್ಣಯಿಸಿತು.

ಧಾರವಾಡ ಜಿಲ್ಹಾ ಮ್ಯಾಜಿಸ್ಟ್ರೇಟರು ಒಂದು ಪ್ರಕಟನೆ ಹೊರಡಿಸಿ ತಾ. ೨೫ ರಿಂದ ಮಾರ್ಚ ೩೧ ವರೆಗೆ ಹುಬ್ಬಳ್ಳಿ ತಾಲೂಕ ಕೃಷ್ಣಾಪುರದಲ್ಲಿ ಜರುಗಲಿದ್ದ ಶ್ರೀ ಸಿದ್ಧಾರೂಢ ಮಠ ಶಿವರಾತ್ರಿ ಜಾತ್ರೆಯನ್ನು ಎರಡು ತಿಂಗಳ ವರೆಗೆ ಪ್ರತಿಬಂಧಿಸಿದ್ದಾರೆ.

ಚುನಾವಣೆ ಪ್ರಚಾರವನ್ನು ಸಂಘಟಿತ ರೀತಿಯಲ್ಲಿ ಸಾಗಿಸುವದಕ್ಕಾಗಿ ಶ್ರೀ ಎಂ. ಆರ್. ಪಾಟೀಲರಿಗೆ ಹುಬ್ಬಳ್ಳಿ ತಾ. ಕಾಂ. ಕಮಿಟಿಯು ಅಧಿಕಾರ ಕೊಟ್ಟಿದೆ. ಸಹಾಯ ನಿಧಿಗಾಗಿ, ಪ್ರಚಾರಕ್ಕಾಗಿ ಹುಬ್ಬಳ್ಳಿ ನಗರ, ತಾಲೂಕ ಹಾಗು ಕಲಘಟಗಿ ತಾಲೂಕಿನಲ್ಲಿ ಎಲ್ಲ ಕಾರ್ಯಕರ್ತರೂ ಅವರಿಗೆ ನೆರವಾಗಬೇಕೆಂದು ಬಿನ್ನವಿಸಲಾಗಿದೆ.

ಹುಬ್ಬಳ್ಳಿ ಮರಾಠಾ ಸಮಾಜದವರು ಚುನಾವಣೆಯಲ್ಲಿ ಕಾಂಗ್ರೆಸ್ಸಿಗೆ ಬೆಂಬಲ ಕೊಡಲು ನಿರ್ಣಯಿಸಿದ್ದಾರೆ.

ಶ್ರೀಗಳಾದ ನೇಸ್ರಿ, ಆರ್. ಎಂ. ಪಾಟೀಲ, ವಿ. ಎಸ್. ಪಾಟೀಲ ಹಾಗು ಮಾಗಡಿಯವರು ನವಲಗುಂದ ತಾಲೂಕಿನ ಕಾಂಗ್ರೆಸ ಪ್ರಚಾರ ಮಾಡಿ ಬಂದರು. ಪ್ರಚಾರಕ್ಕೆ ಬರುವದವಶ್ಯವಿಲ್ಲೆಂದೂ ತಾವೆ ತಮ್ಮ ಚಕ್ಕಡಿಗಳಲ್ಲಿ ಬಂದು ಕಾಂಗ್ರೆಸ್ಸಿಗೆ ಮತ ಕೊಡುವದಾಗಿ ಮತದಾರರು ಅವರಿಗೆ ತಿಳಿಸಿದರು.

ಹುಬ್ಬಳ್ಳಿ ಸೀದಾ ಕ್ಷೇತ್ರದಲ್ಲಿ ತಾ. ೨೧ ರಿಂದ ೧ ೩|೮ ಸೇರುಗಳೆಂದರೆ ಒಂದು ಯೂನಿಟ್ಟು ಸೀದಾ ಎಂದು ನಿರ್ಧರಿಸಲಾಗಿದೆ. ದೊಡ್ಡವರ ಕಾರ್ಡಿಗೆ ೨॥ ಸೇರು ಸೀದಾ ದೊರೆಯುವದು.

ಸಿಗ್ಗಾವಿಯ ಓರ್ವ ಸರಕಾರೀ ಅಧಿಕಾರಿಗಳು ಮತ್ತು ಬೇರೆ ೩-೪ ಗೃಹಸ್ಥರು ಪರಮಿಟ್ಟಿಗಿಂತ ಹೆಚ್ಚು ಭತ್ತ ತಂದುದನ್ನು ಫೌಜದಾರರು ಹಿಡಿದಿರುತ್ತಾರೆಂದು ತಿಳಿಯುತ್ತದೆ.

ಧಾರವಾಡ-ಹುಬ್ಬಳ್ಳಿ ರೋಟರಿ ಕ್ಲಬ್ಬಿನವರು ಅಮೇರಿಕೆಯ ರೋಟರಿ ಇಂಪೀರಿಯಲಕ್ಕೆ ತಂತಿ ಕಳಿಸಿ ಹಿಂದುಸ್ತಾನಕ್ಕೆ ತೀವ್ರ ಆಹಾರ ಧಾನ್ಯ ಪೂರೈಸಲಿಕ್ಕೆ ಹೆಚ್ಚು ಪ್ರಯತ್ನ ಮಾಡಿರೆಂದು ಬಿನ್ನವಿಸಿದ್ದಾರೆ.

ಶ್ರೀಗಳಾದ ದಿವಾಕರ, ಕೆ. ಪಿ. ಗದಗ, ಡಾ. ಕಬ್ಬೂರ, ಹುಕ್ಕೇರಿಕರ, ಕೆ. ಎಫ್. ಪಾಟೀಲ, ವೀರನಗೌಡಾ ಪಾಟೀಲ, ತಂಬಾಕದ, ನೆಸ್ರಿ ಮೊದಲಾದ ಮಹನೀಯರು ಒಂದು ಪ್ರಕಟನೆ ಹೊರಡಿಸಿ ಸ್ತ್ರೀ ಸ್ಥಳಕ್ಕೆ ಕಾಂಗ್ರೆಸ ವತಿಯಿಂದ ನಿಂತಿರುವ ಶ್ರೀ ಯಲ್ಲವ್ವಾ ಸಾಂಬ್ರಾಣಿ (ಹರಿಜನ) ಯವರನ್ನು ಪ್ರಚಂಡ ಬಹುಮತದಿಂದ ಆರಿಸಿ ತರಬೇಕೆಂದು ಮತದಾರರನ್ನು ಬಿನ್ನವಿಸಿರುವರು.

ಬರೇಲಿ ತುರಂಗದಲ್ಲಿ ಆಮರಣ ಉಪವಾಸ ಪ್ರಾರಂಭಿಸಿದ್ದ ಕರ್ನಾಟಕದ ಕ್ರಾಂತಿಕಾರ ಶ್ರೀ ವಿ. ಜಿ. ಅಂಗಡಿಯವರು ಶ್ರೀ ಜೋಗೇಶ ಚಟರ್ಜಿಯವರ ಮಧ್ಯಸ್ತಿಕೆಯಿಂದ ಉಪವಾಸ ನಿಲ್ಲಿಸಿದ್ದಾರೆಂದು ತಿಳಿಯುತ್ತದೆ. ೧೯೩೪ ರ ಅಲಹಾಬಾದ ರೇಲ್ವೆ ಲೂಟ ಖಟ್ಲೆಯಲ್ಲಿ ಇವರು ೧೦ ವರ್ಷ ಕಠಿಣ ಶಿಕ್ಷೆಗೆ ಗುರಿಯಾಗಿರುವರು.

ಗದಗ ವಿದ್ಯಾದಾನ ಸಮಿತಿ ಚವ್ಹಾಣ ಹಾಯಸ್ಕೂಲಿನ ವಾರ್ಷಿಕೋತ್ಸವವು ತಾ. ೨೫ ಕ್ಕೆ ಜಿಲ್ಹಾ ನ್ಯಾಯಾಧೀಶರಾದ ಶ್ರೀ ದಳವಿಯವರ ಅಧ್ಯಕ್ಷತೆಯಲ್ಲಿ ನೆರವೇರಿತು. ರಾ. ಸಾ. ಪಂಡುಲಾಲ ಚವ್ಹಾಣರು ಪಾರಿತೋಷಕ ಹಂಚಿದರು.

ಶಿಗ್ಗಾವಿ ಹಾವೇರಿ ತಾಲೂಕುಗಳಲ್ಲಿ ಕಾಂಗ್ರೆಸ ಪ್ರತಿಸ್ಪರ್ಧಿಗಳ ಸೊಲ್ಲೆ ಕೇಳಬರುತ್ತಿಲ್ಲ. ಶ್ರೀಗಳಾದ ವೀರನಗೌಡ ಪಾಟೀಲ, ಕಲ್ಲನಗೌಡ ಪಾಟೀಲ, ಹಳ್ಳಿಕೇರಿ, ಡಾ. ಮಲ್ಲನಾಯಕ ಮೊದಲಾದವರು ಈ ಭಾಗಗಳಲ್ಲಿ ಸಂಚರಿಸಿ ಬಂದರು.

## ಬೆಳಗಾವಿ

ನಿಪ್ಪಾಣಿಯಲ್ಲಿ ಶ್ರೀ ಚನ್ನಪ್ಪ ವಾಲಿ ಹಾಗು ಕಲ್ಲೂರ ರಾಯನಗೌಡರು ತಾ ೨೧ಕ್ಕೆ ದೊಡ್ಡ ಸಭೆಯಲ್ಲಿ ಕಾಂಗ್ರೆಸ್ಸಿಗೇ ಏಕೆ ಮತ ಕೊಡಬೇಕೆಂಬ ಬಗ್ಗೆ ಉದ್ಬೋಧಕ ಭಾಷಣ ಮಾಡಿದರು.

ಶಾಸನ ಸಭೆಗೆ ಕಾಂಗ್ರೆಸ್ಸು ಹುರಿಯಾಳಾಗಿ ನಿಂತಿರುವ ಶ್ರೀ ಎಸ್ ಎಸ್ ಅಂಗಡಿಯವರಿಗೆ ಬೈಲಹೊಂಗಲ ತಾಲೂಕಿನ ಯಾವತ್ತೂ ಕೇಂದ್ರಗಳು, ಖಾನಾಪುರ ತಾಲೂಕಿನ ಇಟಗಿ ಮತ್ತು ಪಾರಿಶ್ವಾಡ ಕೇಂದ್ರಗಳು ಹಾಗು ಬೆಳಗಾವಿ ನಗರದ ೭ ಮತ್ತು ೯ ವಾರ್ಡ ಈ ಎರಡು ಕೇಂದ್ರಗಳನ್ನು ಹಂಚಿಕೊಡಲಾಗಿದೆ.

ಶ್ರೀ ದಳವಾಯಿಯವರಿಗೆ ಸವದತ್ತಿ ತಾಲೂಕಿನ ಯಾವತ್ತೂ ಮತದಾನ ಕೇಂದ್ರಗಳು, ಖಾನಾಪುರ ತಾಲೂಕಿನ ಇಟಗಿ, ಪಾರಿಶ್ವಾಡಗಳನ್ನು ಬಿಟ್ಟು ಉಳಿದ ಕೇಂದ್ರಗಳು ಮತ್ತು ಬೆಳಗಾವಿ ತಾಲೂಕಿನ ಬಾಗೆವಾಡಿ ಮತ್ತು ಭೆಂಡಿಗೇರಿ ಈ ಎರಡು ಕೇಂದ್ರಗಳನ್ನು ಹಂಚಿಕೊಡಲಾಗಿದೆ.

ಶ್ರೀ ಕಟ್ಟಿಯವರಿಗೆ ಬೆಳಗಾವಿ ನಗರದ ೭ ಹಾಗು ೯ ಈ ಎರಡು ವಾರ್ಡಗಳನ್ನು ಬಿಟ್ಟು ಉಳಿದ ವಾರ್ಡಗಳು ಬೆಳಗಾವಿ ತಾಲೂಕಿನ ಬಾಗೆವಾಡಿ, ಭೆಂಡಿಗೇರಿ ಈ ಕೇಂದ್ರಗಳನ್ನು ಬಿಟ್ಟು ಈ ತಾಲೂಕಿನಲ್ಲಿಯ ಮತ್ತು ಚಂದಗಡ ಮಹಾಲಿನಲ್ಲಿಯ ಯಾವತ್ತೂ ಮತದಾನ ಕೇಂದ್ರಗಳನ್ನೂ ಹಂಚಿಕೊಡಲಾಗಿದೆ.

ಶ್ರೀ ಬಿ. ಬಿ. ಮಮದಾಪುರ ಇವರು ಬೆಳಗಾವಿ ದಕ್ಷಿಣ ಹುರಿಯಾಳಾಗಿ ನಿಂತಿರುವರಷ್ಟೆ. ಮೊದಲು ಅವರು ಕಾಂಗ್ರೆಸ್ಸಿನ ಪರವಾಗಿ ನಿಲ್ಲಲು ಅರ್ಜಿ ಕೊಟ್ಟಿದ್ದರೆಂದೂ ಆರಿಸಲ್ಪಡದಿದ್ದರೆ ಕಾಂಗ್ರೆಸ ವಿರುದ್ಧ ನಿಲ್ಲುವದಿಲ್ಲವೆಂದು ಪ್ರತಿಜ್ಞೆ ಗೈದಿದ್ದರೆಂದೂ ತಿಳಿಯುತ್ತದೆ. ಈ ಪ್ರತಿಜ್ಞಾ ಭಂಗ ಏಕೆ ಮಾಡಿದರು ಎಂಬ ಬಗ್ಗೆ ಸ್ಪಷ್ಟೀಕರಣ ಕೇಳಲಾಗಿದೆಂದು ವಿಶ್ವಸನೀಯವಾಗಿ ತಿಳಿಯುತ್ತದೆ.

ಮುಂಬಯಿ ಶಾಸನ ಸಭೆಯ ಮುಸ್ಲಿಂ ಸ್ಥಳಕ್ಕೆ ನಿಂತಿದ್ದ ಹಾಶಮಸಾಹೇಬ ಜಮಾದಾರರು ಲೀಗಿನ ಅಧಿಕೃತ ಹುರಿಯಾಳಾದ ಶ್ರೀ ಘೀವಾಲಾರ ಪರವಾಗಿ ತಮ್ಮ ಉಮೇದ್ವಾರಿಕೆಯನ್ನು ಹಿಂತೆಗೆದುಕೊಂಡಿದ್ದಾರೆ ಇನ್ನು ಚುನಾವಣೆಯು ಈ ಮೂವರಲ್ಲಿ ನಡೆಯುವದು. ೧. ಶ್ರೀ ಹವಾಲ್ದಾರ (ರಾಷ್ಟ್ರೀಯ ಮುಸ್ಲಿಂ) ೨. ಘೀವಾಲಾ (ಲೀಗ) ಮತ್ತು ೩ ಖಾದರಸಾಬ ಶೇಖ (ಸ್ವತಂತ್ರ).

ಹಿಂದೀ ರಾಷ್ಟ್ರೀಯ ಸೇನೆಯ ೬ ಯೋಧರು ಬಿಡುಗಡೆ ಹೊಂದಿ ಬೆಳಗಾವಿಗೆ ಬಂದಿರುವರು ಅವರಲ್ಲಿ ಮೂವರು ಕಾರವಾರ ಜಿಲ್ಲೆಯವರೂ ಮೂವರು ಸಾವಂತವಾಡಿಯವರೂ ಇರುವರು.

ಬೆಳಗಾವಿಯಲ್ಲಿ ರಾಮಲಿಂಗಖಿಂಡಿಯಲ್ಲಿ ಖಾನಾವಳಿಯಲ್ಲಿ ಜೂಜಾಡುತ್ತಿದ್ದ ೯ ಜನರನ್ನು ಬಂಧಿಸಲಾಗಿದೆಯಲ್ಲದೆ ೨೫೦ ರೂ. ಗಳನ್ನು ಜಪ್ತ ಮಾಡಲಾಗಿದೆ.

## ಬಳ್ಳಾರಿ

ಮದ್ರಾಸ ಶಾಸನ ಸಭೆಗೆ ಬಳ್ಳಾರಿ ಜಿಲ್ಹೆಯಿಂದ ಶ್ರೀಗಳಾದ ಎಚ್ ಸೀತಾರಾಮರೆಡ್ಡಿ, ಬೂದಿಹಾಳ ಅನಂತಾಚಾರ್ಯ ಮತ್ತು ಜಯಲಕ್ಷ್ಮೀದೇವಿ ಟಿ. ಬಿ. ಯವರು ಕಾಂಗ್ರೆಸ್ಸು ಹುರಿಯಾಳುಗಳಾಗಿದ್ದಾರೆ ಈ ಭಾಗದಿಂದ ನಾಮಪತ್ರ ಸಲ್ಲಿಸುವ ದಿನ ಮಾರ್ಚ ೧.

ಬಳ್ಳಾರಿ ಜಿಲ್ಲಾ ಕಾಂಗ್ರೆಸ ಸಮಿತಿಯ ಸಭೆಯು ತಾ ೨೩ ಕ್ಕೆ ಹೊಸಪೇಟೆಯಲ್ಲಿ ಶ್ರೀ ಎ ವೀರಾಸ್ವಾಮಿಯವರ ಅಧ್ಯಕ್ಷತೆಯಲ್ಲಿ ಕೂಡಿತ್ತು. ಐ. ಎನ್. ಎ ರಿಲೀಫ ಮತ್ತು ಡಿಫೆನ್ಸ ಸಮಿತಿಯೊಂದು (೧೪ ಸದಸ್ಯರು) ಸ್ಥಾಪಿತವಾಯಿತು, ಜಿಲ್ಹಾ ಚುನಾವಣೆ ಸಮಿತಿಗೂ ಕಾಂಗ್ರೆಸ ಘಟನೆಯ ಬಗ್ಗೆ ಬಂದ ಪ್ರಶ್ನಾವಳಿಯನ್ನು ವಿಚಾರಿಸುವ ಸಮಿತಿಗೂ ಸದಸ್ಯರನ್ನು ಆರಿಸಲಾಯಿತು. ಹಡಗಲಿ ತಾಲೂಕನ್ನು ಹೊಸಪೇಟೆಯಲ್ಲಿ ಸಮಾವೇಶಗೊಳಿಸಿ ಹೊಸಪೇಟೆ ಸರ್ಕಲ ಕಾಂಗ್ರೆಸ ಸಮಿತಿ ಏರ್ಪಡಿಸಲು ನಿರ್ಧರಿಸಲಾಯಿತು. ಆಹಾರ ಕೊರತೆಯನ್ನನುಲಕ್ಷಿಸಿ ಜಿಲ್ಹೆಯಲ್ಲಿ ಉತ್ಸವಗಳು ಜರುಗಬಾರದೆಂದೂ ಅನೌಪಚಾರಿಕ ಸೀದಾ ಪದ್ಧತಿಯು ಜಾರಿಯಲ್ಲಿ ಬರಬೇಕೆಂದೂ ಪ್ರತಿಪಾದಿಸಲಾಯಿತು.

## ವಿಜಾಪುರ

ತಾ. ೨೪ ಕ್ಕೆ ಕೂಡಿದ ಬಾಗಿಲಕೋಟೆ ನಗರ ಸಭೆಯು ಸಾಮಾನ್ಯ ಸಭೆಯಲ್ಲಿ ಪುರ ಪ್ರಮುಖರೂ ಸುಪ್ರಸಿದ್ಧ ವಕೀಲರೂ ಆದ ಧಾರವಾಡ ಬಲದುರ್ಗರಾಯರು ನಗರಾಧ್ಯಕ್ಷರಾಗಿ ಸರ್ವಾನುಮತದಿಂದ ಆರಿಸಲ್ಪಟ್ಟರು.

ಶ್ರೀ ಎಸ್. ಟಿ. ಪಾಟೀಲರು ಉತ್ತರ ಭಾಗದ ಸ್ವತಂತ್ರ ಹುರಿಯಾಳಾಗಿ ನಿಂತಿರುವರಷ್ಟೆ. ಅವರು ಹೋದ ಸಾರೆ ಕಾಂಗ್ರೆಸ ಪಕ್ಷವನ್ನು ಕೂಡಿದ್ದರು. ಈಗ ಅದರ ವಿರುದ್ಧ ಅವರು ನಿಂತಿದ್ದು ಜನರಿಗೆ ಆಶ್ಚರ್ಯವನ್ನುಂಟು ಮಾಡಿದೆ.

ಶ್ರೀಗಳಾದ ಕುರ್ತಕೋಟಿ, ಕೌದಿ ಹಾಗು ಹುರಿಯಾಳುಗಳಾದ ಮಗನಲಾಲ ಶಹಾ, ಸಜ್ಜನ ಮತ್ತು ಹುಜರೆಯವರು ಚುನಾವಣೆ ಪ್ರಚಾರದ ಸಲುವಾಗಿ ಮುದ್ದೆಬಿಹಾಳ, ಬಾಗೇವಾಡಿ, ಸಿಂದಗಿ ತಾಲೂಕಗಳಲ್ಲಿ ಸಂಚರಿಸುತ್ತಿರುವರು.

ಯಲಗೂರ ಕಾರ್ತಿಕೋತ್ಸವದಲ್ಲಿ ಸಾರ್ವಜನಿಕ ಸಭೆಗಳು ನಡೆದು ಶ್ರೀಗಳಾದ ಹಬ್ಬು, ಬುರ್ಲಿ ಬಿಂಧು ಮಾಧವ ಮತ್ತು ಜಾಹಗೀರದಾರ ಬಿಂದಾಚಾರ್ಯರು ಭಾಷಣ ಮಾಡಿ ಕಾಂಗ್ರೆಸ್ಸಿಗೆ ಮತ ಕೊಡಬೇಕೆಂದು ಬಿನ್ನವಿಸಿದರು. ಶ್ರೀಗಳಾದ ಕಬ್ಬೂರ, ಹೀರಾಚಂದ, ಗಣಪತಚಂದ ಮೊದಲಾದವರು ಬಬಲೇಶ್ವರ ಕಾಖಂಡಕಿ, ಮಮದಾಪುರ ಜೈನಾಪುರ ಮೊದಲಾದ ಹಳ್ಳಿಗಳನ್ನು ಸಂಚರಿಸಿ ಬಂದರು. ಜಿಲ್ಲೆಯಲ್ಲಿ ಮತದಾರರಲ್ಲಿ ಅಪೂರ್ವ ಉತ್ಸಾಹ ಕಂಡುಬರುತ್ತಿದೆ. ಕಾಂಗ್ರೆಸ್ಸಿಗೇ ಪ್ರಚಂಡ ಬೆಂಬಲ ದೊರೆಯುವದೆಂದು ಅಂದಾಜ ಮಾಡಲಾಗಿದೆ.

ಬಾಗಲಕೋಟೆ ಇಂಡಸ್ಟ್ರಿಯಲ ಅಸೋಶಿಯೇಶನಕ್ಕೆ ಜಿಲ್ಲೆಯಲ್ಲಿ ನೂಲು ಆಯಾತ ಮಾಡುವ ಮತ್ತು ಹಂಚುವಿಕೆಯ ಲೈಸನ್ಸನ್ನು ಸರಕಾರದವರು ರದ್ದು ಮಾಡಿ ಜಿಲ್ಲಾ ಕೋಅಪರೇಟಿವ ಬ್ಯಾಂಕಿಗೆ ಕೊಟ್ಟಿರುವರು.

## ಕಾರವಾರ

ಸಿರಸಿಯಲ್ಲಿ ತಾ ೨೪ ಕ್ಕೆ ಕಾಂಗ್ರೆಸ ಚುನಾವಣೆ ಪ್ರಚಾರದ ಸಭೆಯು ಕೂಡಿತ್ತು. ಮುಧೋಳದ ಕೆ. ವಿ. ಮಠದ ಮೃತ್ಯುಂಜಯ ಸ್ವಾಮಿಗಳು ಅಧ್ಯಕ್ಷತೆ ವಹಿಸಿದ್ದರು. ಟಿ. ಎಸ್ ನಾಯ್ಕ, ಗೋಪಿಗಾಂವಕರ, ಶಾಸ್ತ್ರಿ, ಪ್ರಭು ಮೊದಲಾದವರು ಭಾಷಣ ಮಾಡಿ ಕಾಂಗ್ರೆಸ ಹುರಿಯಾಳುಗಳಿಗೇ ಮತ ಕೊಡಬೇಕೆಂದು ಬಿನ್ನವಿಸಿದರು. ಎಲ್ಲೆಡೆಯಲ್ಲಿಯೂ ಕಾಂಗ್ರೆಸ್ಸಿಗೇ ಬೆಂಬಲವಿದೆ.

ಮುಂಬಯಿ ಸ್ಟೀಮ ನಾವಿಗೇಶನ ಕಂಪನಿಯ ಪ್ರಯಾಣಿಕರ ಹಡಗವು ತಾ ೨೬ ರಿಂದ ಮುಂಬಯಿಯಿಂದ ಮೆಲ್ಪೆಯ ನಡುವೆ ಪ್ರತಿ ಮಂಗಳವಾರ ಓಡಾಡಲು ಆರಂಭಿಸಿದೆ. ಅದು ಮುಂಬಯಿ, ವೆಂಗುರ್ಲಾ, ಕಾರವಾರ, ಕುಮಟಾ, ಭಟಕಳ ಹಾಗು ಮಲ್ಪೆ ಬಂದರಗಳಲ್ಲಿ ಪ್ರಯಾಣಿಕರನ್ನು ತೆಗೆದುಕೊಳ್ಳುವದು.

# ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಕರ ಚಳವಳಿ

( ೬ನೇ ಪುಟದಿಂದ )

ನವಕರಿ ಮಾಡುವ ಊರನ್ನು ಬಿಡಲಿಕ್ಕೆ ಅಡ್ಡಿಯಿಲ್ಲ ೮ ಉಪಜೀವನಕ್ಕಾಗಿ ಖಾಸಗಿ ಶಿಕ್ಷಣವನ್ನು ಕೊಡಲಿಕ್ಕೆ ಅಡ್ಡಿಯಿಲ್ಲ. ೯ ಸಂಪಿನಲ್ಲಿ ಯಾವತ್ತೂ ಶಿಕ್ಷಕ—ಶಿಕ್ಷಕಿಯರೂ ಭಾಗವಹಿಸತಕ್ಕದ್ದು. ೧೦ ಇಲಾಖೆಯೊಳಗಿನ ಪ್ರತಿಯೊಂದು ಹಳ್ಳಿಯಿಂದ ನಾಮದಾರ ಗವ್ಹರ್ನರ ಸಾಹೇಬರ ಕಡೆಗೆ ಅರ್ಜಿಗಳು ಹೋಗಲಿಕ್ಕೇ ಬೇಕು. ಜನತೆಯಿಂದ ಸಾವಿರಾರು ತಾರುಗಳು ಸರಕಾರಕ್ಕೆ ಹೋಗಿರಿಕ್ಕೆಬೇಕು ೧೧ ಸಂಪು ಯಶಸ್ವಿಯಾಗುವಂತೆ ಸ್ಥಾನಿಕ ಪರಿಸ್ಥಿತಿಗನುಸರಿಸಿ ಉಪಾಯ ಯೋಜನೆಗಳನ್ನು ಮಾಡತಕ್ಕದ್ದು. ೧೨ ಜಿಲ್ಹೆಯ ಹಾಗು ಶಹರಗಳ ಹೊಣೆಯು ಅಲ್ಲಿಯ ಕಾರ್ಯಕರ್ತರ ಮೇಲೆ ವಿಶೇಷವಾಗಿ ಅದೆ. ಅವರು ಸ್ವಯಂಸ್ಫೂರ್ತಿಯಿಂದ ಕಾರ್ಯಕ್ರಮಗಳನ್ನು ರಚಿಸತಕ್ಕದ್ದು. ೧೩ ಪ್ರತಿ ದಿವಸ ಮುಂಜಾನೆ ಪ್ರಭಾತಫೇರಿ ತೆಗೆಯತಕ್ಕದ್ದು. ನಿಧಿ ಸಂಗ್ರಹ ಮಾಡತಕ್ಕದ್ದು.

# ಅರ್ಧ ಕೋಟಿ ಜನ ಕಾಂಗ್ರೆಸ ಸದಸ್ಯರಾದರು

## ಬಿಹಾರಕ್ಕೆ ಪ್ರಥಮ ಸ್ಥಾನ

"ಈ ಸಲ ಹೆಚ್ಚುಕಡಿಮೆ ೫೦ ಲಕ್ಷ ಜನ ಕಾಂಗ್ರೆಸಿನ ಪ್ರಾಥಮಿಕ ಸದಸ್ಯರಾಗಿ ಸೇರಿದ್ದಾರೆ. ಬಿಹಾರಕ್ಕೆ ಪ್ರಥಮ ಸ್ಥಾನ ಸಿಕ್ಕಿದೆ ಈ ಪ್ರಾಂತದಲ್ಲಿ ೧೧,೨೭,೯೮೦ ಜನ ಕಾಂಗ್ರೆಸ ಸದಸ್ಯರಾಗಿರುವರು" ಎಂದು ಅ. ಭಾ. ಕಾಂ. ಸಮಿತಿಯ ಕಚೇರಿ ಕಾರ್ಯದರ್ಶಿ ಸಾದಿಕ್ ಅಲಿಯವರು ಒಂದು ಪ್ರಕಟನೆ ಹೊರಡಿಸಿದ್ದಾರೆ. ಕಾಂ. ಸದಸ್ಯರನ್ನು ಕೂಡಿಸಲು ಬಹಳ ಅಲ್ಪಾವಧಿ ದೊರೆತಿತ್ತು. ಚುನಾವಣೆ ಕೆಲಸವಿದುದರಿಂದಲೂ ಅದರ ಕಡೆ ವಿಶೇಷ ಗಮನಕೊಡಲಾಗಲಿಲ್ಲವೆಂದವರು ಹೇಳಿ ವಿವಿಧ ಪ್ರಾಂತಗಳ ಅಂಕೆ ಸಂಖ್ಯೆಗಳನ್ನು ಕೊಟ್ಟಿದ್ದಾರೆ.

| | | |
|---|---|---|
| ೧ | ಬಿಹಾರ | ೧೧,೨೭,೯೮೦ |
| ೨ | ಯುಕ್ತಪ್ರಾಂತ | ೮,೮೩,೦೦೦ |
| ೩ | ಆಂಧ್ರ | ೬,೩೫,೨೦೦ |
| ೪ | ಬಂಗಾಲ | ೫,೪೨,೨೭೬ |
| ೫ | ತಮಿಳನಾಡು | ೪,೨೩,೪೩೫ |
| ೬ | ಗುಜರಾತ | ೨,೪೪,೨೬೬ |
| ೭ | ಮಹಾರಾಷ್ಟ್ರ | ೨,೧೪,೧೮೮ |
| ೮ | ಪಂಜಾಬ | ೧,೮೪,೬೯೮ |
| ೯ | ಮಹಾಕೋಸಲ | ೧,೬೨,೬೯೮ |
| ೧೦ | ಕೇರಳ | ೧,೧೩,೧೨೬ |
| ೧೧ | ವಿದರ್ಭ | ೧,೦೦,೦೨೩ |
| ೧೨ | ಆಸಾಂ | ೧,೨೦,೨೦೦ |
| ೧೩ | ಉತ್ಕಲ | ೧,೦೩, ೦೬ |
| ೧೪ | ನಾಗಪುರ | ೮೨,೨೬೯ |
| ೧೫ | ದಿಲ್ಲಿ | ೩೭,೩೬೨ |
| ೧೬ | ಅಜಮೀರ | ೧೨,೫೨೦ |

ಮುಂಬಯಿ, ಸಿಂಧ, ಕರ್ನಾಟಕ ಮತ್ತು ಗಡಿನಾಡ ಪ್ರಾಂತಗಳಿಂದ ಇನ್ನು ವರದಿ ಬಂದಿಲ್ಲ.

# ಅಂತರ್‌ರಾಷ್ಟ್ರೀಯ

[೫ನೇ ಪುಟದಿಂದ ಮುಂದರಿದುದು]

ನಂಬಲಾರದ ಚಮತ್ಕಾರವನ್ನು ಕಣ್ಣಾರೆ ಕಂಡು ಪತ್ರಿಕಾ ಪ್ರತಿನಿಧಿಗಳು ಆಶ್ಚರ್ಯಚಕಿತರಾಗಿದ್ದಾರೆ.

## ಯಾರಿಗೂ ಹಿತವಿಲ್ಲ

ಅನೇಕ ದಿನಗಳ ಮೌನದ ನಂತರ ಇಂಡೊನೇಶಿಯನ್ ಪ್ರಜಾರಾಜ್ಯದ ಮುಖ್ಯ ಮಂತ್ರಿ ಸುಲ್ತಾನ ಶಹರಿಯಾರರು ಬಾಯಿಬಿಚ್ಚಿ ಮಾತಾಡಿದ್ದಾರೆ. ಡಾ. ವಾನ ಮೂಕರು ಹಾಲಂಡದಿಂದ ತಂದಿರುವ ಡಚ್-ಇಂಡೊನೇಶಿಯನ್ ಪಾಲುಗಾರಿಕೆಯ ಕೊಡುಗೆ ಇಂಡೋನೇಶಿಯಾದಲ್ಲಿ ಯಾರನ್ನೂ ತೃಪ್ತಗೊಳಿಸಿಲ್ಲವೆಂದು ಅವರು ಸ್ಪುಟವಾಗಿ ಹೇಳಿದರು.

ಡಚ್ಚರು ಈ ಕೊಡುಗೆಯ ಸಂಬಂಧದಲ್ಲಿ ಇದೀಗ ಒಂದು "ವಿವರಣೆ"ಯನ್ನು ಹೊರಡಿಸಿ ತಮ್ಮ ಕೊಡುಗೆ ವಸಾಹತುಗಳ ಶೋಷಣೆಯ ಹೊಸ ಅಧ್ಯಾಯವಲ್ಲವೆಂದೂ ಇದೇ ತಲೆಮಾರಿನಲ್ಲಿ ಇಂಡೋನೇಶಿಯನ್ನರನ್ನು ಸ್ವಾತಂತ್ರ್ಯಯೋಗ್ಯರಾಗಿ ಮಾಡಿ ಯುಕ್ತ ರಾಷ್ಟ್ರಗಳಿಗೆ ಪ್ರವೇಶ ದೊರೆಕಿಸುವಂತೆ ಮಾಡುವದೇ ತಮ್ಮ ಘನ ಉದ್ದೇಶವೆಂದೂ ಸಾರಿದ್ದಾರೆ. ಇಂಡೊನೇಶಿಯಾದ ವಿವಿಧ ಜನಾಂಗಗಳನ್ನು ಒಂದಾಗಿ ಎರಕ ಹೊಯ್ಯುವದಕ್ಕೆ ಈ ಅವಧಿ ಬೇಕು. ಈ ಅವಧಿಯಲ್ಲಿಯೂ ಆಂತರಿಕ ದಿನದಿನದ ಆಡಳಿತಗಳಲ್ಲಿ ಡಚ್ ವೈಸರಾಯನು ಕೈಹಾಕುವದಿಲ್ಲ; ಕೇವಲ ಹಾಲಂಡದ ಅಂತರ್‌ರಾಷ್ಟ್ರೀಯ ವ್ಯಾಜ್ಯಗಳ ವಿಷಯದಲ್ಲಿ ಮಾತ್ರ ಹಾಲಂಡು ಅಧಿಕಾರ ಚಲಾಯಿಸುವದು ಇತ್ಯಾದಿಯಾಗಿ ಆ ವಿವರಣೆಯ ಹೇಳಿಕೆ.

ಗಾಂಧೀಜಿಯವರನ್ನು ಭೆಟ್ಟಿಯಾಗಿ ಮಾತುಕತೆ ನಡೆಸಿದ ಭೋಪಾಲದ ನವಾಬರು ಪಂಡಿತ ನೆಹರುರವರನ್ನು ಬೇಗನೆ ಕಾಣಲಿರುವರು. ಗಾಂಧೀಜಿಯವರೊಡನೆ ನಡೆಸಿದ ಮಾತುಕತೆಯು ಫಲಪ್ರದವಾಯಿತೇ ಎಂದು ಪ್ರಶ್ನಿಸಲು "ಗಾಂಧೀಜಿಯವರೊಡನೆ ನಾವು ನಡೆಸಿದ ಚರ್ಚೆಯು ಯಾವಾಗಲೂ ಆಶಾದಾಯಕವಿರುವದು" ಎಂದು ಉತ್ತರವಿತ್ತರು.

# ಹಿಂದುಸ್ತಾನ

## ಮುಂಬಯಿ

ಆಗಾಖಾನರು ಮತ್ತು ಭೋಪಾಲದ ನವಾಬರು ೨೫ನೇ ತಾರೀಖಿನ ದಿನ ೪ ಘಂಟೆಗೆ ಪುಣೆಯ ನೈಸರ್ಗಿಕ ಚಿಕಿತ್ಸಾ ಭವನದಲ್ಲಿ ಮಹಾತ್ಮಾ ಗಾಂಧಿಯವರನ್ನು ಕಂಡು ಮಾತುಕತೆ ನಡೆಸಿದರು.

ವಿಧಾಯಕ ಕಾರ್ಯಕರ್ತರಿಗೆ ವಿಧಾಯಕ ಕಾರ್ಯಕ್ರಮದಲ್ಲಿ ಎಪ್ರೀಲ ೧ ತಿಂಗಳು ಶಿಕ್ಷಣ ಕೊಡುವದಕ್ಕಾಗಿ ಸೇವಾಗ್ರಾಮದಲ್ಲಿ ಒಂದು ಶಿಬಿರವನ್ನು ಸ್ಥಾಪಿಸಲಾಗುವದು. ಮಾರ್ಚ ೫ನೇ ತಾರೀಖಿನೊಳಗಾಗಿ ಕನೂ ಗಾಂಧಿಯವರಿಗೆ ಅರ್ಜಿ ಕಳಿಸಬೇಕೆಂದು ಸೂಚಿಸಲಾಗಿದೆ.

ಶ್ರೀ ಬಿ. ಜಿ. ಖೇರರು ಸುರತದಲ್ಲಿ ಭಾಷಣ ಮಾಡುತ್ತ, ಸದ್ಯದ ಶಿಕ್ಷಣ ಕ್ರಮದಿಂದ ನಮ್ಮಲ್ಲಿ ಸುಶಿಕ್ಷಿತರೆಂಬ ಹೊಸದೊಂದು ವರ್ಗ ತಲೆಎತ್ತಿದೆ. ಇದನ್ನು ನಷ್ಟಗೊಳಿಸಬೇಕಾದರೆ ವರ್ಧಾ ಶಿಕ್ಷಣ ಯೋಜನೆಯೇ ಉಪಾಯವೆಂದು ಹೇಳಿ, ದೇಶದ ಅಜ್ಞಾನವನ್ನು ಹೋಗಲಾಡಿಸಲು ಯತ್ನಿಸುವುದಾಗಿ ಹೇಳಿದರು.

ಪುಣೆ ವಿಶ್ವವಿದ್ಯಾಲಯದ ವಿಸ್ತೃತ ಯೋಜನೆ ತಯಾರಿಸಲು ಆರ್. ಪಿ. ಪಟವರ್ಧನರ ಅಧ್ಯಕ್ಷತೆಯಲ್ಲಿ ೨೧ ಜನ ಶಿಕ್ಷಣತಜ್ಞರ ಸಮಿತಿ ನೇಮಿಸಲ್ಪಟ್ಟಿದೆ.

ಕೂಲಿಕಾರರ ಸೀದಾದಲ್ಲಿ ೧/೩ ದಷ್ಟು ಕಡಿಮೆ ಮಾಡಿದ್ದರಿಂದ ಕೂಲಿಕಾರರ ಆರೋಗ್ಯಕ್ಕೆ ಅಘಾತವುಂಟಾಗುತ್ತದೆ. ಎಂದು ಅಹಮ್ಮದಾಬಾದ ಕೂಲಿಕಾರ ಸಂಘದವರು ಅಹಾರ ಮಂತ್ರಿಗಳಿಗೆ ತಿಳಿಸಿದ್ದಾರೆ.

ಮಹಾತ್ಮಾ ಗಾಂಧಿಯವರು ಆಗಾಖಾನ್ ಅರಮನೆಯಲ್ಲಿರುವ ಕಸ್ತೂರ ಬಾ ಮತ್ತು ಮಹದೇವ ದೇಸಾಯರ ಸಮಾಧಿಗಳನ್ನು ಸಂದರ್ಶಿಸಿ ಅವುಗಳ ಮೇಲೆ ಪುಷ್ಪಗಳನ್ನೇರಿಸಿದರು. ಆಗಾಖಾನರು ಅಮೃತಶಿಲೆಯಿಂದ ಸುಂದರ ಸಮಾಧಿಗಳನ್ನು ಕಟ್ಟಿಸಿದ್ದಾರೆ.

ಪುಣೆಯಲ್ಲಿ ಸ್ಥಾನಬದ್ಧರಾಗಿರುವ ೪ ಅಫಘಾನ ರಾಜಮನೆತನದವರು ಮಹಾತ್ಮರನ್ನು ಭೆಟ್ಟಿಯಾಗಿ ತಮ್ಮ ಸಂಕಷ್ಟಗಳನ್ನು ನಿವೇದಿಸಲು, ಜನಾಪರಣೀಯ ಸರಕಾರಗಳು ರಚಿಸಲ್ಪಟ್ಟ ಕೂಡಲೆ ಅವುಗಳನ್ನು ನಿವಾರಿಸಲಾಗುವುದೆಂದರು.

ಮುಂಬಯಿ ಸರಕಾರವು ಒಂದು ಪ್ರಕಟನೆಯನ್ನು ಹೊರಡಿಸಿ, ಹಿಂದುಳಿದ ವರ್ಗದವರ ಶಿಷ್ಯವೃತ್ತಿಯು ೨೫ ರೂ. ಗಳಿಗಿಂತ ಕಡಿಮೆಯಿದ್ದುದನ್ನು ಈಗ ೨೫ ರೂ. ಗೆ ಏರಿಸಿದ್ದಾರೆ. ಪ್ರಾಥಮಿಕ ಟ್ರೇನಿಂಗ ಕಾಲೇಜ ಮತ್ತು ಮಾಧ್ಯಮಿಕ ಶಾಲೆಗಳಲ್ಲಿ ಕೊಡುತ್ತಿರುವ ಶಿಷ್ಯವೃತ್ತಿ ಹಣವು ನೂರಕ್ಕೆ ೫೦ ರಷ್ಟು ಹೆಚ್ಚಿಸಲ್ಪಟ್ಟಿದೆ.

ಮುಂಬಯಿ-ಮಂಗಳೂರು ಪ್ರಯಾಣಿಕರ ಉಗಿಹಡಗ ಸರ್ವಿಸ ಆರಂಭವಾಗಿದೆ.

## ಮದ್ರಾಸ

ತ್ಯಾಗ, ಸೇವೆ ಹಾಗೂ ಜ್ಞಾನವಿಲ್ಲದವರ ವಶ ಕಾಂಗ್ರೆಸ್ಸು ಸಿಕ್ಕಿದರೆ ಮಂಗನ ಕೈಯಲ್ಲಿ ಮಾಣಿಕ್ಯದೊರೆತಂತಾಗುವುದೆಂದು ಶ್ರೀ ಕೃಪಲಾನಿಯವರು ಮದ್ರಾಸಿನಲ್ಲಿ ಕೂಡಿದ ಹಿಂದೀ ವಿದ್ಯಾರ್ಥಿಗಳ ಕಾಂಗ್ರೆಸ್ಸಿನ ದ್ವಿತೀಯ ವಾರ್ಷಿಕ ಅಧಿವೇಶನದ ಉದ್ಘಾಟನಾ ಸಮಾರಂಭವನ್ನು ನೆರವೇರಿಸುತ್ತಾ ನುಡಿದರು. ಶ್ರೀ ಅಶೋಕಾ ಮೇಥಾರವರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಕಾಮರಾಜ ನಾಡರ, ವಿ. ವಿ. ಗಿರಿ, ಪ್ರಕಾಶಂ ಮುಂತಾದವರೂ ಭಾಷಣ ಮಾಡಿದರು.

ಮದ್ರಾಸ ಶಾಸನ ಸಭೆಯ ಚುನಾವಣೆಯನ್ನು ಹೋರಾಡಲು ಕಾಂಗ್ರೆಸ್ಸು ಆರಿಸಿರುವ ಹುರಿಯಾಳುಗಳಲ್ಲಿ ಸ್ತ್ರೀಯರಿಗೆ ಸಾಕಷ್ಟು ಪ್ರಾತಿನಿಧ್ಯ ಕೊಟ್ಟಿಲ್ಲವೆಂಬದನ್ನು ನಿಷೇಧಿಸುವುದಕ್ಕಾಗಿ ಇಲ್ಲಿಯ ತ್ರಿಪುರಸುಂದರಿ ಅಮ್ಮಾಳ ಮತ್ತು ಶ್ರೀಮತಿ ಸರಸ್ವತಿ ಪಾಂಡುರಂಗಂ ಎಂಬಿಬ್ಬರು ಮಹಿಳೆಯರು ತಮಿಳನಾಡ ಕಾಂಗ್ರೆಸ ಕಮಿಟಿಯೆದುರು ಅನ್ನಸತ್ಯಾಗ್ರಹ ಹೂಡಿದ್ದಾರೆ.

ಮದ್ರಾಸ ವಿಧಿ ಮಂಡಲದ ನಗರ ಸ್ಥಳಕ್ಕೆ ಕಾಂಗ್ರೆಸ ಹುರಿಯಾಳಾದ ಡಾ. ಯು. ರಾಮರಾಯರೊಬ್ಬರೇ ಆರಿಸಿ ಬಂದಂತಾಗಿದೆ

ರಾಜಾಜಿಯವರು ಮಹಾತ್ಮಾ ಗಾಂಧೀಜಿಯವರಿಗೊಂದು ಪತ್ರ ಬರೆದು ರಾಜಕೀಯ ರಂಗದಿಂದ ನಿವೃತ್ತರಾಗಲು ಅಪ್ಪಣೆ ಕೋರಿದ್ದಾರೆ.

## ಹೊಸದಿಲ್ಲಿ

ಹಿಂದುಸ್ತಾನ ಸರಕಾರದವರು ಒಂದು ಆಜ್ಞೆ ಹೊರಡಿಸಿ, ಸಂರಕ್ಷಣ ಕಾಯಿದೆಯ ನಂ. (ಸಿ) ಕಲಮನ್ನು ರದ್ದುಗೊಳಿಸಿ ಚಿನ್ನದ ಮೇಲಿನ ವಾಯಿದೆ ವ್ಯಾಪಾರದ ಅವಧಿ ನಿರ್ಬಂಧವನ್ನು ಹಿಂತೆಗೆದುಕೊಂಡಿರುವರು.

ಕಾಂಗ್ರೆಸಧ್ಯಕ್ಷರಾದ ಮೌಲಾನಾ ಅಝಾದರು ವಾಯಿಸರಾಯರನ್ನು ಕಂಡು ಅವರೊಡನೆ ಒಂದು ತಾಸಿನ ವರೆಗೆ ಮಾತುಕತೆ ನಡೆಸಿದರು.

ಹಿಂದುಸ್ತಾನಕ್ಕೆ ಆಸ್ಟ್ರೇಲಿಯದಿಂದ ಆಹಾರ ವಸ್ತುಗಳನ್ನು ತರಿಸಲಾಗುವುದು. ಈಗಾಗಲೇ ೫೨೯೦೦ ಟನ ಕಾಳುಕಡಿಯನ್ನು ಹೇರಿಕೊಂಡು ಹಿಂದುಸ್ತಾನಕ್ಕೆ ಹಡಗಗಳು ಹೊರಟಿವೆ.

ವಾಯಿಸರಾಯರು ಆಗಾಖಾನ ಮತ್ತು ಹಿಂದೂ ಪತ್ರಿಕೆಯ ಸಂಪಾದಕರಾದ ಶ್ರೀ ಶ್ರೀನಿವಾಸನ್ನರಿಗೆ ಭೆಟ್ಟಿಕೊಟ್ಟರು.

ಕ್ಯಾ. ಬುರ್ಹಾಣ ಉದ್ದೀನರಿಗೆ ದಂಡಿನ ನ್ಯಾಯಸ್ಥಾನವು ವಿಧಿಸಿದ್ದ ಆಮರಣ ಪರ್ಯಂತ ಶಿಕ್ಷೆಯನ್ನು ಹಿಂದುಸ್ತಾನದ ಮುಖ್ಯ ಸೇನಾಪತಿ ಅಚಿನಲೆಕ್ಕರವರು ೭ ವರುಷ ಕಠಿನ ಶಿಕ್ಷೆಗೆ ಇಳಿಸಿದ್ದಾರೆ. ಅರಸರ ವಿರುದ್ಧ ಯುದ್ಧ ಹೂಡಿದ ಹಾಗೂ ಹಿಂಸಾಚಾರವೆಸಗಿದ ಆಪಾದನೆಗಳು ಸ್ಥಿರ ಮಾಡಲ್ಪಟ್ಟವೆ. ಕೊಲೆಯ ಅಪರಾಧ ಬಿದ್ದುಹೋಯಿತು.

ಆಸ್ಪತ್ರೆಗಳಲ್ಲಿ ದುಡಿಯುತ್ತಿರುವ ಕಂಪೌಂಡರ ಮತ್ತು ಇನ್ನಿತರ ಕೆಲಸಗಾರರ ಸಭೆಯು ದಿಲ್ಲಿಯಲ್ಲಿ ೨ ದಿನ ನಡೆದು ೨೫ ನೇ ತಾರೀಖಿಗೆ ಮುಗಿಯಿತು. ಹೆಚ್ಚಿಗೆ ಸಂಬಳ ಕೊಡಬೇಕು. ಮತ್ತು ಕೆಲಸದ ತಾಸುಗಳನ್ನು ಕಡಿಮೆ ಮಾಡಬೇಕು ಎಂಬ ಗೊತ್ತುವಳಿಗಳು ಅವರ ಸಭೆಯಲ್ಲಿ ಸ್ವೀಕೃತವಾಗಿವೆ.

## ಮಧ್ಯಪ್ರಾಂತ

ಮಧ್ಯಪ್ರಾಂತದ ಕಾಂಗ್ರೆಸ ಧುರೀಣರಾದ ಶ್ರೀ ಅವಾರಿಯವರು ಅನ್ನಸತ್ಯಾಗ್ರಹವನ್ನು ಆರಂಭಿಸಿದ್ದಾರೆ. ತಮಗೂ ನಾಗಪುರ ಕಾಂಗ್ರೆಸ ಕಮಿಟಿ ಅಧ್ಯಕ್ಷರಾದ ರಂಕಾ ಇವರಿಗೂ ಕೇಂದ್ರ ಚುನಾವಣಿ ಮಂಡಲವು ಅಪಮಾನ ಮಾಡಿದೆ ಯೆಂಬುದೇ ಉಪವಾಸದ ಕಾರಣ. ಅಪಮಾನದ ಸುದ್ದಿ ಸುಳ್ಳು ಪ್ರಾಂತಿಕ ಚುನಾವಣಿ ಮಂಡಳವು ಆರಿಸಿದ ಅವರನ್ನು ಹುರಿಯಾಳನ್ನಾಗಿ ಕೇಂದ್ರ ಪಾರ್ಲಿಮೆಂಟರಿ ಮಂಡಳವು ಆರಿಸದೆ ಇದ್ದುದೇ ಉಪವಾಸಕ್ಕೆ ಕಾರಣವಾಗಿದೆಯೆಂದು ಕೇಂದ್ರ ಚುನಾವಣಿ ಮಂಡಲದ ಕಾರ್ಯದರ್ಶಿಗಳು ಪ್ರಕಟಿಸಿರುವರು.

## ಗಡಿನಾಡ ಪ್ರಾಂತ

ಗಡಿನಾಡ ಪ್ರಾಂತದ ಹೊಸ ಶಾಸನ ಸಭೆಯಲ್ಲಿ ಕಾಂಗ್ರೆಸ್ಸು ಬಹುಸಂಖ್ಯಾಕ ಪಕ್ಷವಿರುವದರಿಂದ ಅದರ ಧುರೀಣರಾದ ಡಾ. ಖಾನ ಸಾಹೇಬರನ್ನು ಗವರ್ನರರು ಆಮಂತ್ರಿಸಿ, ಹೊಸ ಮಂತ್ರಿಮಂಡಳವನ್ನು ರಚಿಸಲು ಕೇಳಿಕೊಂಡರು. ಮತ್ತು ಖಾನ ಸಾಹೇಬರು ಅದಕ್ಕೊಪ್ಪಿದರು.

ಕಾಂಗ್ರೆಸಧ್ಯಕ್ಷರಾದ ಅಝಾದರು ವಿಮಾನದ ಮೂಲಕ ಪೇಶಾವರಕ್ಕೆ ತೆರಳಿ ಖಾನ ಸಹೋದರರನ್ನು ಭೆಟ್ಟಿಯಾಗಿ ಹಿಂತಿರುಗಿದರು. ಗಡಿನಾಡಿನ ಶಾಸನ ಸಭೆಯ ಕಾಂಗ್ರೆಸ ಪಕ್ಷದ ಸಭೆಯಲ್ಲೂ ಹಾಜರಿದ್ದರು.

ಶ್ರೀ ಮೊಹದ ಯೂನಸಖಾನರೆಂಬ ಗಡಿನಾಡಿನ ಕಾಂಗ್ರೆಸ ಮುಖಂಡರು ಪಂಡಿತ ನೆಹರುರವರ ಆಮಂತ್ರಣದ ಮೇರೆಗೆ ಅಲ್ಲಾಹಾಬಾದಕ್ಕೆ ಚುನಾವಣಿ ಪ್ರಚಾರಕ್ಕೆ ತೆರಳಲಿರುವರು. ಈಗಾಗಲೇ ೩೦ ಕೆಂಪಂಗಿಯವರೂ ಪಂಜಾಬದ ೧೫ ರಾಷ್ಟ್ರೀಯ ಕಾರ್ಯಕರ್ತರೂ ತೆರಳಿರುವರು.

ಗಡಿನಾಡಿನ ಚುನಾವಣಿಯಲ್ಲಿ ಕಾಂಗ್ರೆಸಿಗೆ ಯಶ ದೊರೆತ ಸಂಬಂಧವಾಗಿ ಪಂಡಿತ ನೆಹರುರವರು ಖಾನ ಸಹೋದರರಿಗೆ ಒಂದು ತಂತಿ ಕಳಿಸಿ, ಇಂಕಿಲಾಬ ಝಿಂದಾಬಾದ, ಝಂಡಾ ಊಂಚಾ ರಹೆ ಹಮಾರಾ '' ಎಂದು ಅಭಿನಂದಿಸಿದ್ದಾರೆ.

## ಸಂಯುಕ್ತಪ್ರಾಂತ

ತಾವು ಅಝಾದ ಹಿಂದ ಸೇನೆಗೆ ಸೇರಿದವರೆಂದು ಹೇಳಿಕೊಂಡು ಎಸ್. ಎಸ್. ಶರ್ಮಾರವರು ಹಿಂದುಸ್ತಾನದಲ್ಲಿ ಸಂಚರಿಸುತ್ತಿದ್ದಾರೆ. ಅವರು ಆಸಾಮದಲ್ಲಿರುವರಂತೆ. ಪಂಡಿತ ನೆಹರುರವರ ಸಹಿಯಿದ್ದ ಕೆಲವು ಕಾಗದಪತ್ರಗಳನ್ನು ತೋರಿಸಿ ಅಸಂಬದ್ಧ ಮಾತನಾಡುತ್ತಿರುವರಂತೆ. ಆದರೆ ಅವರು ಹಿಂ, ರಾ. ಸೇನೆಗೆ ಸೇರಿಲ್ಲ ಹಾಗೂ ನೆಹರುರವರು ಸಹಿ ಹಾಕಿ ಕಾಗದ ಬರೆದು ಕೊಟ್ಟಿಲ್ಲವೆಂದು ಯುಕ್ತ ಪ್ರಾ. ಕಾ. ಸಮಿತಿಯ ಕಾರ್ಯದರ್ಶಿ ಕೇಶವದೇವ ಮಾಲವೀಯರು ಪ್ರಕಟಿಸಿರುವರು.

ಅಲ್ಲಾಹಾಬಾದ ಕರ್ನಾಟಕ ಸಂಘದ ಎರಡನೆಯ ವಾರ್ಷಿಕೋತ್ಸವವು ಅಧ್ಯಕ್ಷರಾದ ಡಾ. ಆರ್. ಎಸ್. ಪಟಕಿಯವರ ಮನೆಯಲ್ಲಿ ಸಂಭ್ರಮದಿಂದ ಜರುಗಿತು. ಅ. ಭಾ. ಪತ್ರಿಕಾ ಸಂಪಾದಕರ ಸಮ್ಮೇಳನಕ್ಕಾಗಿ ಬಂದಿದ್ದ ಶ್ರೀ ಹಣಮಂತರಾವ ಮೋಹರೆ, ವಿ. ಬಿ. ನಾಯಕ ಮತ್ತು ಹ. ರಾ. ಪುರೋಹಿತ ಇವರು ಮುಖ್ಯ ಅತಿಥಿಗಳಾಗಿದ್ದರು.

ಬ್ರಿಟಿಶ ಶಿಷ್ಟಮಂಡಳವನ್ನು ಸ್ವಾಗತಿಸಿ ಸರ್ ತೇಜಬಹದ್ದೂರ ಸಪ್ರುರವರು ಒಂದು ಹೇಳಿಕೆಯನ್ನು ಹೊರಡಿಸಿದ್ದಾರೆ. ಮಧ್ಯ ಕಾಲದಲ್ಲಿ ಕೇಂದ್ರ ತಾತ್ಪೂರ್ತಿಕ ಸರಕಾರವನ್ನು ಸ್ಥಾಪಿಸುವ ಆ ಮೇಲೆ ಘಟನಾ ಸಮಿತಿಯನ್ನು ರಚಿಸುವ ಮುಖ್ಯ ಪ್ರಶ್ನೆಗಳ ಕಡೆ ಲಕ್ಷ ಕೊಡಬೇಕು. ಶಿಷ್ಟಮಂಡಳವು ಬಂದ ಕೂಡಲೇ ಎಲ್ಲ ಅಧಿಕಾರವನ್ನು ಹಿಂದುಸ್ತಾನಕ್ಕೆ ಬಿಟ್ಟುಕೊಡಲು ನಿರ್ಧರಿಸಲಾಗಿದೆಯೆಂದು ಸ್ಪಷ್ಟಪಡಿಸಬೇಕು. ದೇಶದ ಪ್ರಗತಿಗೆ ಅಡೆತಡೆಯನ್ನುಂಟು ಮಾಡಲು ಯಾವ ಪಕ್ಷಕ್ಕೂ ಅವಕಾಶ ಕೊಡಲಾರೆವೆಂದು ತಿಳಿಸಬೇಕು ಎಂದವರು ಸೂಚಿಸಿದ್ದಾರೆ.

ಸಂಯುಕ್ತ ಪ್ರಾಂತದ ಗವರ್ನರರಾದ ಸರ್ ಫ್ರಾನ್ಸಿಸ್ ವಿಲಿಯಮರು ಪಂಡಿತ ಗೋವಿಂದ ವಲ್ಲಭ ಪಂತರನ್ನು ಅಹಾರ ಪರಿಸ್ಥಿತಿಯ ಬಗ್ಗೆ ಚರ್ಚಿಸಲ ಕರೆಸಿದ್ದರು.

ಲಾಹೋರ ಮೊದಲನೇ ಒಳಸಂಚಿನ ಖಟ್ಲೆಯಲ್ಲಿ ೧೯೧೫ ರಲ್ಲಿ ಶಿಕ್ಷೆಗೆ ಗುರಿಯಾಗಿದ್ದ ಡಾ. ಗಯಾಪ್ರಸಾದ, ಶಿವರಾಮ ವರ್ಮಾ ಮತ್ತು ಜಯದೇವ ಇವರನ್ನು ಸಂ. ಪ್ರಾ. ಸರಕಾರವು ಬಿಡುಗಡೆ ಮಾಡಿದೆ.

## ಬಂಗಾಲ

೧೯೪೫ ರ ಮೇ ತಿಂಗಳಿಂದ ಅಕ್ಟೋಬರದ ವರೆಗೆ ೨ ಕೋಟಿ ೪೭ ಲಕ್ಷ ರೂಪಾಯಿಗಳ ಬೆಲೆಯ ೬೭,೭೭೭ ಟನ್ ಅಕ್ಕಿಯು ಕಲಕತ್ತೆಯಿಂದ ವಿದೇಶಗಳಿಗೆ ಹೋಗಿದೆಯೆಂಬುದು ಕಲಕತ್ತಾ ಕಸ್ಟಮಹೌಸದ ವರದಿಯಿಂದ ಗೊತ್ತಾಗುತ್ತದೆಯೆಂದು ಮಾರವಾಡಿ ವಣಿಕ ಸಂಘದವರು ಪ್ರಕಟಿಸಿರುವರು.

ನಾವು ಪಾಕಿಸ್ತಾನವನ್ನು ಪಡೆದು ಅಲ್ಲಿಯೆ ವಾಸಿಸುವೆವು. ನಾವು ಮುಸ್ಲಿಮರು ಸಂಘಟಿತರಾಗಿದ್ದರೆ ಯಾರೂ ಪಾಕಿಸ್ತಾನದ ಹಕ್ಕನ್ನು ನಿರಾಕರಿಸಲಾರರು. ಮುಸ್ಲಿಮರು ಸುಖದಿಂದ ಜೀವನ ಸಾಗಿಸಬೇಕಾದರೆ ಪಾಕಿಸ್ತಾನ ಪಡೆಯದ ಹೊರತು ಗತ್ಯಂತರವಿಲ್ಲವೆಂದು ಜಿನ್ನಾರವರು ಕಲಕತ್ತೆಯಲ್ಲಿ ಕೂಡಿದ ಮುಸ್ಲಿಮರ ಸಭೆಯಲ್ಲಿ ನುಡಿದರು.

ಕಲಕತ್ತಾದ ಅಂಚೆ ತಂತಿ ಕೆಲಸಗಾರರ ಸಭೆ ಸೇರಿ ಅಂಚೆ ತಂತಿ ಮಹಾಮಂಡಲಗಳಿಗೆ ಬೆಂಬಲವಿತ್ತರಲ್ಲದೆ, ಆ ಠರಾವಿನಲ್ಲಿ ಸೂಚಿಸಲ್ಪಟ್ಟಂತೆ ತಮ್ಮ ಬೇಡಿಕೆಗಳು ಮಾನ್ಯವಾಗದೇ ಇದ್ದಲ್ಲಿ ಸಂಪಿನ ನೋಟೀಸ ಕೊಡಲು ಪ್ರಧಾನ ಕಾರ್ಯದರ್ಶಿಗಳಿಗೆ ಅಧಿಕಾರ ಕೊಟ್ಟರು.

ಮಾರಾಟಕರ ನಿಷೇಧಕ್ಕಾಗಿ ಕಲಕತ್ತೆ ವ್ಯಾಪಾರಿಗಳು ಪ್ರಾರಂಭಿಸಿದ ಹರತಾಳವು ೯ ದಿನಗಳು ಉರುಳಿದರೂ ನಿಂತಿಲ್ಲ. ೨೩ ನೇ ತಾರೀಖಿಗೆ ಔಷಧದ ವ್ಯಾಪಾರಿಗಳೂ ಹರತಾಳದಲ್ಲಿ ಸೇರಿಕೊಂಡರು.

ಬಂಗಾಲ ಶಾಸನ ಸಭೆಗೆ ಅವಿರೋಧವಾಗಿ ಆರಿಸಿ ಬಂದ ೪೪ ಹುರಿಯಾಳುಗಳಲ್ಲಿ ಕಾಂಗ್ರೆಸ್ಸಿಗರು ೧೩, ಲೀಗ್ ೫, ಯುರೋಪಿಯನ್ ೨೩, ಹಿಂದುಮಹಾಸಭಾ ೧ ಮತ್ತು ಸ್ವತಂತ್ರ ೧ ಹೀಗೆ ಸ್ಥಾನಗಳು ದೊರೆತಿವೆ.

ಕಲಕತ್ತಾ ಹಾಗೂ ಬಂಗಾಲದ ಇನ್ನಿತರ ನಗರಗಳಲ್ಲಿ ಹಿಂ. ರಾ. ಸೈನ್ಯ ಪರಿಹಾರ ನಿಧಿಗೆ ಪ್ರತಿಯೊಂದು ಮನೆಯವರಿಂದ ತಲಾ ೧ ಆಣೆಯಂತೆಯೂ ಉಳಿದ ಭಾಗಗಳಲ್ಲಿ ತಲಾ ೧ ದುಡ್ಡಿನಂತೆಯೂ ಸ್ವಯಂ ಸೇವಕರು ನಿಧಿ ಕೂಡಿಸುವರೆಂದು ಕಮಿಟಿಯ ಕಾರ್ಯದರ್ಶಿಗಳು ನುಡಿದರು.

## ಪಂಜಾಬ

ಪಂಜಾಬದಲ್ಲಿ ಕಾಂಗ್ರೆಸ ಮತ್ತು ಲೀಗ ಪಕ್ಷಗಳ ಸಮ್ಮಿಶ್ರ ಮಂತ್ರಿಮಂಡಳವನ್ನು ರಚಿಸಬೇಕೆಂದು ಅ. ಭಾ. ಮುಸ್ಲಿಂ ಲೀಗಿನ ವರ್ಕಿಂಗ ಕಮೀಟಿ ಸದಸ್ಯರಾದ ಎಂ. ಎಚ್. ಗಝಧರರು ಸೂಚಿಸಿದರು. ಇತ್ತೀಚೆಗೆ ಲಾಹೋರದಲ್ಲಿ ತಾವು ಅಝಾದ ಮತ್ತು ಅಸಫಅಲ್ಲಿಯವರನ್ನು ಭೆಟ್ಟಿಯಾಗಿ ಈ ವಿಷಯದ ಬಗ್ಗೆ ಚರ್ಚೆ ನಡೆಸಿದವೆಂದೂ ಕಾಂಗ್ರೆಸ್ಸಿನೊಡನೆ ಸಮ್ಮಿಶ್ರ ಮಂತ್ರಿಮಂಡಳ ರಚಿಸಲು ಪಂಜಾಬದ ಲೀಗ ಮುಖಂಡರು ಸಿದ್ಧರಿರುವರೆಂದೂ ಅವರು ತಿಳಿಸಿದರು.

ಪಂಜಾಬದಲ್ಲಿ ನಡೆದ ಚುನಾವಣೆಯಲ್ಲಿ ಶಾಸನ ಸಭೆಯ ಒಟ್ಟು ೧೭೫ ಸ್ಥಳಗಳಲ್ಲಿ ಲೀಗಕ್ಕೆ ೭೫, ಕಾಂಗ್ರೆಸ್ಸಿಗೆ ೫೧, ಯುನಿಯನಿಸ್ಟರಿಗೆ ೨೦, ಅಕಾಲಿ ಶೀಖರಿಗೆ ೨೨ ಮತ್ತು ಸ್ವತಂತ್ರರಿಗೆ ೨ ಸ್ಥಾನಗಳು ದೊರೆತಿವೆ.

ಯುನಿಯನಿಸ್ಟ ತಿವಾನಾ, ಲೀಗಿನ ಫಿರೋಜಖಾನನೂನ, ಇಫ್ತಿಕಾರುದ್ದೀನ, ಕಾಂಗ್ರೆಸ್ಸಿನ ದಿವಾಣ ಚಮನಲಾಲ ಹಾಗು ಕ್ಯಾ. ರಣಜಿತಸಿಂಹ ಮುಂತಾದವರು ಆರಿಸಿ ಬಂದಿದ್ದಾರೆ.

ಈಗ ಸರಕಾರವನ್ನು ಸ್ಥಾಪಿಸುವ ಬಗ್ಗೆ ಶಾಸನ ಸಭೆಯ ಕಾಂಗ್ರೆಸ, ಲೀಗ, ಅಕಾಲಿ ಶೀಖಪಕ್ಷಗಳ ಪ್ರತ್ಯಪ್ರತ್ಯೇಕ ಸಭೆ ಕೂಡಿದೆ.

ಫಾರ್ವರ್ಡ ಬ್ಲಾಕದ ತಾತ್ಪೂರ್ತಿಕ ಅಧ್ಯಕ್ಷರಾಗಿದ್ದ ಸರದಾರ ಶಾರ್ದೂಲಸಿಂಗರನ್ನು ಬಿಡುಗಡೆ ಮಾಡಲಾಗಿದೆ. ಇದಲ್ಲದೆ ಇನ್ನಿತರ ಎಲ್ಲ ರಾಜಕೀಯ ಕೈದಿಗಳನ್ನು ಬಿಡುಗಡೆ ಮಾಡಿರುವರು. ಕಾಂಗ್ರೆಸ್ಸಿನ ಸ್ನೇಹ ಸಂಪಾದಿಸಲು ಯುನಿಯನಿಸ್ಟ ತಿವಾನರ ಯತ್ನವಿದು.

ಕಾಂಗ್ರೆಸಧ್ಯಕ್ಷರಾದ ಅಝಾದರು ಪೇಶಾವರಕ್ಕೆ ತೆರಳಿದಾಗ ಲಾಹೋರ ವಿಮಾನ ಗೃಹದಲ್ಲಿಳಿದರು. ಆಗ ಹಿಂದೀ ವೈಮಾನಿಕರನೇಕರು ವಿಮಾನ ಗೃಹಕ್ಕೆ ಬಂದು ಮೌಲಾನಾರಿಗೆ ಅಪೂರ್ವ ಸ್ವಾಗತವನ್ನಿತ್ತು ಅವರು ತಮ್ಮ ಸೇನಾಪತಿಯೆಂದು ಹೇಳಿದರು. ಒಬ್ಬನು ಹಿಂದೀ ವೈಮಾನಿಕನ ಪರವಾಗಿ ಕಮ್ಮಿಣಿಯನ್ನು ಅರ್ಪಿಸಿದನು. ಸ್ವತಂತ್ರ ಹಿಂದುಸ್ತಾನದಲ್ಲಿ ನಮ್ಮನ್ನು ದೇಶದ್ರೋಹಿಗಳೆಂದು ನಡೆಸಿಕೊಳ್ಳಲಿಕ್ಕಿಲ್ಲವಷ್ಟೆ ಎಂದು ವೈಮಾನಿಕರು ತಿಳಿಸಲು "ನೀವು ನಮ್ಮ ರಾಷ್ಟ್ರದ ಒಂದು ಅಂಗ'ವೆಂದು ಹೇಳಿದರು. ವೈಮಾನಿಕರೊಡನೆ ಅಝಾದರು ಚಹಾಪಾನವನ್ನು ಮಾಡಿದರು.

## ★ ವಿಮಾನ ದಾಳಿಯ ಬಲಿ

ಇದೇ ಮುಗಿದ ಮಹಾಯುದ್ಧದಲ್ಲಿ ಒಟ್ಟು ೫ ಲಕ್ಷಕ್ಕಿಂತಲೂ ಹೆಚ್ಚು ಜನ ಜರ್ಮನರು ಮಿತ್ರರ ಬಾಂಬುದಾಳಿಗೆ ಆಹುತಿಯಾಗಿ ಸತ್ತರೆಂದು ಅಮೇರಿಕನ್ ವರದಿಯೊಂದು ಹೇಳುತ್ತದೆ. ಬಾಂಬುದಾಳಿಗೆ ಆಹುತಿಯಾದ ಜರ್ಮನರ ಸಂಖ್ಯೆ ಹೆಚ್ಚು ಕಡಿಮೆ ಬ್ರಿಟನ್ ಮತ್ತು ಬ್ರಿಟಿಶ್ ಸಾಮ್ರಾಜ್ಯದ ಎಲ್ಲ ಪಡೆಗಳಲ್ಲಿ ಯುದ್ಧದಲ್ಲಿ ಸತ್ತವರ ಒಟ್ಟು ಸಂಖ್ಯೆ ಮತ್ತು ಬ್ರಿಟನ್‌ದಲ್ಲಿ ಜರ್ಮನ್ ವಿಮಾನ ದಾಳಿಗಳಿಂದ ಸತ್ತವರ ಸಂಖ್ಯೆಯನ್ನು ಸೇರಿಸಿದಷ್ಟು ಆಗುವದು. ಈ ದಾಳಿಗಳಲ್ಲಿ ಬೆಂಕಿ ಮತ್ತು ಹೊಗೆಯಿಂದ ಸತ್ತವರೇ ಹೆಚ್ಚು. "ಸರ್ವತೋ ಯುದ್ಧದಲ್ಲಿ ಆಸ್ಪತ್ರೆಗಳ ಮೇಲಿನ ರೆಡ್ ಕ್ರಾಸ್ ಗುರುತು ದಾಳಿಯಿಂದ ರಕ್ಷಣೆ ಮಾಡುವ ಬದಲು ತಿಂಗಳ ಬೆಳಕಿನ ರಾತ್ರಿಯಲ್ಲಿ ವೈಮಾನಿಕರ ವಿಶೇಷ ಲಕ್ಷಕ್ಕೆ ಗುರಿಯಾಗುತ್ತವೆ" ಎಂದು ಹೇಳಿ ಆ ವರದಿ ಜರ್ಮನಿಯ ಆಸ್ಪತ್ರೆಗಳನ್ನು ನಿರ್ದಯದಿಂದ ಮಿತ್ರರು ನಿರ್ನಾಮ ಮಾಡಿ ಜರ್ಮನಿಯ ಆರೋಗ್ಯ ವ್ಯವಸ್ಥೆಯನ್ನೇ ಕೆಡಿಸಿದರೆಂದು ಸೂಚಿಸುತ್ತದೆ.

# “ರೇಲ್ವೆ—ರಸ್ತೆ ಸಂಯೋಜನೆ ತ್ಯಜಿಸಿರಿ!”

## ಶಾಸನ ಸಭೆಯಲ್ಲಿ ಕಡಿತ ಸೂಚನೆಯ ಸ್ವೀಕಾರ— ನಾವಿಕರ ಸಂಪಿನ ಬಗ್ಗೆ ನಿಲುವಳಿ ಸೂಚನೆ— ರೇಲ್ವೆ ಮುಂಗಡ ಪತ್ರ ಚರ್ಚೆಯ ಮುಕ್ತಾಯ

ಕೇಂದ್ರ ಶಾಸನ ಸಭೆ ಅಧಿವೇಶನದಲ್ಲಿದ್ದಾಗಲೆ ಮುಂಬಯಿಯಲ್ಲಿ ನಾವಿಕರ ಸಂಪು ಮತ್ತು ಗಲಭೆ ನಡೆದುದರಿಂದ ಆಗಲೆ ಈ ವಿಷಯದಲ್ಲಿ ತಮ್ಮ ಮನಸನ್ನು ತೆರೆದು ತೋರಿಸುವ ಅವಕಾಶ ವಿರೋಧಿ ಪಕ್ಷದವರಿಗೆ ದೊರೆಯಿತು. “ಹಿಂದೀ ನೌಕಾಪಡೆಯ ಅಧಿಕಾರಿಗಳು ನಾವಿಕರನ್ನು ಕೆಟ್ಟ ರೀತಿಯಲ್ಲಿ ನಡಸಿಕೊಂಡದ್ದರಿಂದ ಗಂಭೀರ ಪರಿಸ್ಥಿತಿಯುಂಟಾಗಿ ಇಡೀ ಪಡೆಯನ್ನೆ ಆವರಿಸಿದೆ” ಎಂಬದಾಗಿ ಕಾಂಗ್ರೆಸ ಪಕ್ಷದ ಉಪಧುರೀಣ ಶ್ರೀ ಆಸಫ ಅಲ್ಲಿಯವರು ಮಂಡಿಸಿದ ನಿಲುವಳಿ ಸೂಚನೆ— ಸಂಪಿನ ಪರಿಸ್ಥಿತಿ ಇನ್ನೂ ಗಂಭೀರವಾಗಿರುವಾಗಲೇ—ತಾ ೨೩ಕ್ಕೆ ಶಾಸನ ಸಭೆಯಲ್ಲಿ ೭೪ ವಿರುದ್ಧ ೪೦ ಮತಗಳಿಂದ ಸ್ವೀಕೃತವಾಯಿತು.

ನಿಲುವಳಿಯನ್ನು ಆಸಫ ಅಲ್ಲಿಯವರು ತಾ ೨೨ಕ್ಕೆ ಮಂಡಿಸಿದರು. ಅವರು ಸಂಪಿನ ಮೂಲವನ್ನು ವಿವರಿಸುತ್ತ ಕಮಾಂಡರ ಕಿಂಗರು ಶ್ರೀ [illegible] ಕೆ ಸಿಂಗರನ್ನು ಬಂಧಿಸಿ ನಾವಿಕರನ್ನು ಅಪಶಬ್ದಗಳಿಂದ ಆಡಿದ್ದನ್ನು ತಿಳಿಸಿದರು. ಜನತೆಯ ಪ್ರತಿನಿಧಿಗಳಿಗೆ ಈ ಸಮಸ್ಯೆಯನ್ನು ಬಿಡಿಸುವ ಕೆಲಸ ಒಪ್ಪಿಸಬೇಕೆಂದು ಅವರು ಅಗ್ರಹಪಡಿಸಿದರು. ಕಮಾಂಡರ ಕಿಂಗರು ನಾವಿಕರನ್ನು “ನಾಯಿ ಮಕ್ಕಳೆ, ಕೂಲಿ ಮಕ್ಕಳೆ” ಎಂದು ಕರೆದರೆಂದು ಶ್ರೀ ಮಸಾನಿಯವರು ಆರೋಪಿಸಿದರು. ಶ್ರೀ ಶರಚ್ಚಂದ್ರ ಜೋಸರು “ಈಗಿದ್ದ ಹುದ್ದೆಯಲ್ಲಿರಲು ಅಯೋಗ್ಯರಾದ ಕೆಲವರು ಪರಿಸ್ಥಿತಿಯನ್ನು ಹದಗೆಡಿಸಿರುವರು” ಎಂದರು. ಹಿಂದೀ ನೌಕಾಪಡೆಯನ್ನ ನಿರ್ನಾಮ ಮಾಡಿಯಾದರೂ ಶಿಸ್ತು ಕಾಯ್ದುಕೊಳ್ಳುವೆಂಬ ಅಡ್ಮಿರಲ್ ಗಾಡಫ್ರೆಯವರ ಬೆದರಿಕೆಯ ಮಾತನ್ನೆತ್ತಿಕೊಂಡು ಕೆಲ ಸದಸ್ಯರು “ಯಾರ ನೌಕಾಪಡೆ? ಯಾರ ಹಣ?” ಎಂದು ಪ್ರಶ್ನಿಸಿದರು. ಇಷ್ಟು ಪ್ರಾಥಮಿಕ ಚರ್ಚೆಯ ನಂತರ ನಿಲುವಳಿಯನ್ನು, ಅದರ ಮಹತ್ವ ಲಕ್ಷಿಸಿ, ಮರುದಿನವೇ ಚರ್ಚೆಗೆ ತಗೆದುಕೊಳ್ಳಬೇಕೆಂದು ಮುಖಂಡರು ಒತ್ತಾಯಪಡಿಸಿದ್ದರಿಂದ ಸಾಮಾನ್ಯವಾಗಿ ಶನಿವಾರ ಬಿಡುವು ತೆಗೆದುಕೊಳ್ಳುತ್ತಿರುವ ಶಾಸನ ಸಭೆ ಅಂದು ಸೇರಿ ಚರ್ಚಿಸಿತು.

### [illegible]ಸನರ ಚಿಂತೆ

ಯುದ್ಧಕಾರ್ಯದರ್ಶಿ ಮೇಸನರು ಸಂಪಿನ ಪರಿಸ್ಥಿತಿಯನ್ನು ವಿವರಿಸಿದರು. ಅಗಲೆ ಸಂಪುಗಾರರು ಶರಣು ಬಂದಿದ್ದರು. ಪರಿಸ್ಥಿತಿ ಶಾಂತವಾಗಿತ್ತು ಎಂಬ ಅಂಶಗಳನ್ನು ಹೊರಗೆಡಹಿ ಅವರು ಹಿಂದೀ ನೌಕಾಪಡೆಯ ಗೌರವದ ವಿಷಯದಲ್ಲಿ ಬಹಳ ಚಿಂತೆಯನ್ನು ವ್ಯಕ್ತಗೊಳಿಸಿದರು. ಹಿಂದೀ ನೌಕಾಪಡೆಯನ್ನು ನಿರ್ನಾಮ ಮಾಡುವ ವಿಚಾರವನ್ನು ಅಡ್ಮಿರಲ್ ಗಾಡಫ್ರೆಯವರು ಆಡಿದಾಗ ಅದರ ಪ್ರತ್ಯಕ್ಷನಾಶ ಅವರ ಮನಸಿನಲ್ಲಿರದೆ ಅದರ ಗೌರವ ಪ್ರತಿಷ್ಠೆಗಳ ನಾಶವೆಂದು ಅವರ ಅರ್ಥವಾಗಿತ್ತೆಂದು ಮೇಸನರ ವ್ಯಾಖ್ಯಾನವಾಗಿತ್ತು! ಕಮಾಂಡರ ಕಿಂಗರು ಅಪಶಬ್ದಗಳನ್ನು ಆಡಿದ್ದರೆಂದು ಮೇಸನ್ನರು ನಂಬಲಿಲ್ಲ. ಅವರೂ ವಿಚಾರಣೆ ಮುಗಿಯುವ ವರೆಗೆ ಖಚಿತವಾಗಿ ಹೇಳಲು ಅವರು ಬಯಸಲಿಲ್ಲ. ಶ್ರೀ ಆಸಫ ಅಲ್ಲಿ, ಮಸಾನಿ (ಕಾಂ) ಶ್ರೀ ಅಬ್ದುರ್ರಹಿಮಾನ ಸಿದ್ದಿಕಿ (ಲೀಗ) ಮುಂತಾದ ಸದಸ್ಯರು ನೌಕಾಪಡೆಯಲ್ಲಿ ವರ್ಣದ್ವೇಷವನ್ನು ಅಧಿಕಾರಿಗಳು ತೋರಿಸಿದ್ದೇ ಈ ಗಲಭೆಗಳಿಗೆ ಕಾರಣವೆಂದರ ಮೇಸನ್ನರು ವರ್ಣಭೇದವನ್ನು ನೀಗಿಸಲು ಮುಖ್ಯ ಸೇನಾಪತಿಗಳು ಮನವಾರೆ ಪ್ರಯತ್ನಿಸುತ್ತಿರುವರೆಂದು ಹೇಳಿ ಸಂಬಳದ ಮಟ್ಟಿಗೆ ಬ್ರಿಟಿಶರಿಗೂ ಹಿಂದೀಯರಿಗೂ ಸಮಾನತೆಯನ್ನು ತಂದರೆ ನಾವಿಕರ ಸಂಖ್ಯೆಯನ್ನು ಕಡಮೆ ಮಾಡಬೇಕಾಗುವದೆಂದು ನೆನ ಹೇಳಿದರು. ಮೇಸನ್ನರು ಈ “ಸಶಸ್ತ್ರ ಜನರ ಅಶಿಸ್ತಿನ” ಸಂಪಿಗೆ ಬ್ರಿಟಿಶ ವೈಮಾನಿಕರು ದಿಲ್ಲಿಯಲ್ಲಿ ಹೂಡಿದ ಆಶಿಸ್ತಿನ ಸಂಪೇ ಹಿಂದೀ ವೈಮಾನಿಕರಲ್ಲಿಯೂ ಹಬ್ಬಿ ಕಾರಣವಾಯಿತೆಂದು ಒಪ್ಪಿಕೊಂಡರು. ಈ ಎಲ್ಲ ವಿಷಯಗಳನ್ನು ಕೂಲಂಕಷವಾಗಿ ವಿಚಾರಿಸಿ ಜನತೆಯ ಅಭಿಪ್ರಾಯವನ್ನು ತೆಗೆದುಕೊಂಡು ಮುಂದಿನ ಕ್ರಮ ತೆಗೆದುಕೊಳ್ಳುವದಾಗಿ ಆಶ್ವಾಸನೆಯಿತ್ತರು. ಈ ಆಶ್ವಾಸನೆಯನ್ನು ಅನುಲಕ್ಷಿಸಿ ಸದಸ್ಯರೂ ರೊಚ್ಚಿಗೆಬ್ಬಿಸುವ ಭಾಷಣ ಮಾಡದೆ ಸೌಮ್ಯ ಟೀಕೆಗಳನ್ನು ಮಾತ್ರ ಮಾಡಿದರು. ಆದುದರಿಂದ ವಿಶೇಷ ಬೇಗುದಿಯಿಲ್ಲದೆ ನಿಲುವಳಿಯ ಮೇಲೆ ಮತದಾನವಾಯಿತು.

### ರೇಲ್ವೆ ಮುಂಗಡ ಪತ್ರಿಕೆ

ರೇಲ್ವೆ ಮುಂಗಡ ಪತ್ರಿಕೆಯ ಮೇಲಿನ ಮೂರು ದಿನಗಳ ಚರ್ಚೆ ತಾ ೨೫ಕ್ಕೆ ಪ್ರಾರಂಭವಾಗಿ ತಾ ೨೭ಕ್ಕೆ ಮುಗಿಯುವದರೊಳಗೆ ೭ ಕಡಿತದ ಸೂಚನೆಗಳು ಅಂಗೀಕೃತವಾಗಿ ಸರಕಾರಕ್ಕೆ ಸೋಲುಗಳಾದವು. ಕಡಿತದ ಸೂಚನೆಗಳಲ್ಲಿ ಅತಿ ದೊಡ್ಡದೆಂದರೆ ರೂ. ೩೪೪ ಲಕ್ಷಗಳದು. ರೇಲ ರಸ್ತೆ ಯೋಜನೆಯಲ್ಲಿ ರೇಲ್ವೆಗಳು ಭಾಗವಹಿಸಲುಬೇಕೆಂದು ಗೊತ್ತುಪಡಿಸಿದ ಈ ಮೊತ್ತದ ಬೇಡಿಕೆಯನ್ನು ಪೂರ್ಣವಾಗಿ ನಿರಾಕರಿಸಲು ಮುಸ್ಲಿಂ ಲೀಗ ಪಕ್ಷದ ನವಾಬ ಸಿದ್ದಿಕಿ ಅಲ್ಲಿಖಾನರು ಮಂಡಿಸಿದ ಕಡಿತದ ಸೂಚನೆಗೆ ಹಿಂದೀ ಪಕ್ಷಗಳೆಲ್ಲ ಬೆಂಬಲವಿತ್ತವು. ಯುರೋಪಿಯನ್ನರು ಮಾತ್ರ ಅದನ್ನು ವಿರೋಧಿಸಿದರು. ಶ್ರೀ ಸಿದ್ದಿಕಿಯವರು ಸರಕಾರದವರು ಈ ವಿಷಯದಲ್ಲಿ ಕೊಟ್ಟ ವಾಗ್ದಾನಗಳನ್ನು ಮುರಿದಿದ್ದಾರೆಂದು ಆರೋಪಿಸಿ, ಹಳೆಯ ಆಪರೇಟರುಗಳನ್ನೆಲ್ಲ ಉಚ್ಚಾಟನಗೊಳಿಸಿ ಮಧ್ಯಪ್ರಾಂತದಲ್ಲಿ ಮೋಟಾರ ಸಾಮಾನುಗಳ ವ್ಯಾಪಾರಿಗಳಿಗೆ ಲಾಯಸೆನ್ಸ ಕೊಟ್ಟ ಉದಾಹರಣೆಯನ್ನು ಕೊಟ್ಟರು. ಕಾಂಗ್ರೆಸ ಪಕ್ಷದ ಶ್ರೀ ಎಂ ಆರ್ ಮಸಾನಿಯವರು ಈ ಯೋಜನೆಯಿಂದ ರಸ್ತೆ ಸಾರಿಗೆಯ ಗುತ್ತಿಗೆಯನ್ನು ಸರಕಾರಕ್ಕೆ ಕೊಟ್ಟುಬಿಟ್ಟಂತಾಗುವದೆಂದು ಹೇಳಿ ಹಿಂದಿದ್ದ ಸ್ಥಿತಿಯಲ್ಲಿ ರಸ್ತೆ ಸಾರಿಗೆಯನ್ನು ಗುತ್ತಿಗೆ ಕೊಡುವ ತತ್ವವನ್ನೇ ವಿರೋಧಿಸಿದರು ಸರ್ ಯಾಮೀನಖಾನ, ಗೋರೆ ಮೊದಲಾದವರೂ ರೇಲ ರಸ್ತೆ ಯೋಜನೆಯನ್ನು ವಿರೋಧಿಸಿ ಮಾತಾಡಿದರು. ರೇಲ್ವೆ ಹಣಕಾಸಿನ ಕಮೀಶನ್ ಟರ್ನರರಿಗೆ ಮಾತ್ರ ಸಿದ್ದಿಕಿಯವರ ಕಡಿತ ಸೂಚನೆ ಎಲ್ಲೋ ಮೈಯಲ್ಲಿ ಸ್ವಲ್ಪ ನೋವಾದರೆ ಶಿರಚ್ಛೇದನವನ್ನೇ ಮಾಡುವ ಉಪದೇಶದಂತೆ ಕಾಣಿಸಿತು. ಸಾರಿಗೆ ಮಂತ್ರಿ ಬೆಂಥಾಲರಿಗಂತೂ ಮೋಟಾರ ಸಾರಿಗೆಯಲ್ಲಿ ಸ್ವಾರ್ಥದ ಹಿತಸಂಬಂಧವುಳ್ಳವರ ಸಂಘಟಿತ ಒತ್ತಾಯದ ಮೂಲಕವೇ ರೇಲ–ರಸ್ತೆ ಯೋಜನೆಗೆ ಈ ವಿರೋಧ ಪ್ರಾಪ್ತವಾದಂತೆ ಕಂಡಿತು. ಈ ಕಡಿತ ಪಾಸಾದರೆ ಈ ದೇಶದ ಸಾರಿಗೆಯ ಬೆಳವಣಿಗೆಗೆ ಅನಿಷ್ಟವಾಗುವದೆಂದೂ ಅವರಿಗೆನಿಸಿತು. ಆದರೂ ಮತಗಣನೆಯಲ್ಲಿ ಸರಕಾರಕ್ಕೆ ೩೬ ಮತಗಳು ಮಾತ್ರ ದೊರೆತವು. ವಿರೋಧಿ ಪಕ್ಷಕ್ಕೆ ೬೬ ಸಿಕ್ಕಿದವು.

ಇತರ ಕಡಿತ ಸೂಚನೆಗಳಲ್ಲಿ, ಕೆಳದರ್ಜೆಯ ರೇಲ್ವೆ ಪ್ರಯಾಣಿಕರ ಸೌಕರ್ಯ ಮತ್ತು ಕಡಿಮೆ ಪಗಾರದ ರೇಲ್ವೆ ಕೆಲಸಗಾರರ ಸಂಬಳಗಳನ್ನು ಹೆಚ್ಚಿಸಬೇಕೆನ್ನುವ ಪ್ರೊ.ರಂಗಾರ ಕಡಿತ, ಇಂಜಿನ ವಾಗೀನುಗಳನ್ನು ಹಿಂದುಸ್ತಾನದಲ್ಲೇ ಕಟ್ಟಬೇಕೆಂಬ ಶ್ರೀ ಠಾಕುರದಾಸ ಭಾರ್ಗವ (ಕಾಂ) ರ ಕಡಿತ, ರೇಲ್ವೆ ಮುಖಾಂತರ ಕಳಿಸಿದ ಸಾಮುಗ್ರಿಗಳ ಕಳವಾಗುವದನ್ನು ಕುರಿತ ಕಡಿತ, ಪೊ[illegible]ವುಗಳು ಮಹತ್ವವು. ಫ್ರಾಂಕ್ ಆಂಥನಿಯವರು ರೇಲ್ವೆ ಕೆಲಸಗಾರರ ಸಂಬಳವನ್ನು ಕನಿಷ್ಠ ೬೦ ರೂಪಾಯಿ ನಿರ್ಣಯಿಸಬೇಕೆಂದು ಮಂಡಿಸಿದ ಸೂಚನೆಗೆ ಸಾಮಾನ್ಯ ಬೆಂಬಲ ದೊರೆತರೂ ಅದು ಮಾತಿನಲ್ಲೆ ಮುಕ್ತಾಯವಾಯಿತು

ರೇಲ್ವೆ ಮುಂಗಡ ಪತ್ರಿಕೆಯ ಚರ್ಚೆ ಮನೋರಂಜಕವೇ ಆಗಿತ್ತು. ರೇಲ್ವೆಗಳಲ್ಲಿ ಆಗುತ್ತಿರುವ ಕಳವಿನ ಚರ್ಚೆಯ ಕಾಲಕ್ಕಂತೂ ಸದಸ್ಯರು ಕೊಟ್ಟ ಉದಾಹರಣೆಗಳು ಬಹಳ ಸ್ವಾರಸ್ಯವಾಗಿದ್ದವು. ಶ್ರೀ ಅಹ್ಮದ ಜಾಫರರು ತಾವು ತಮ್ಮಗೆಳೆಯರೊಬ್ಬರಿಗೆ ಕಳಿಸಿದ್ದ ಹಣ್ಣುಗಳ ಬುಟ್ಟಿ ಆ ತುದಿಗೆ ಮುಟ್ಟಿದಾಗ ಅದು ಇಟ್ಟಿಗೆ ಚೂರುಗಳ ಬುಟ್ಟಿಯಾಗಿತ್ತೆಂದರು. ಸರ್ ಝಿಯಾವುದ್ದೀನ ಅಹ್ಮದರು ಕಳೆದು ಹೋದ ವಸ್ತುಗಳ ಬಗ್ಗೆ ರೇಲ್ವೆಯವರಿಗೆ ಒಪ್ಪಿಸಿದ ಪರಿಹಾರದ ಕೇಳಿಕೆ ಎರಡೂವರೆ ವರ್ಷದ ವರೆಗೆ ತೀರ್ಮಾನವಾಗದ ಉದಾಹರಣೆಯಿತ್ತರು. ಅನಂತಶಯನಯ್ಯಂಗಾರರು ರೇಲ್ವೆ ನೌಕರಿಯಲ್ಲಿರುವ “ಎರಡು ಕಾಲಿನ ಇಲಿಗಳೇ” ಈ ಕಳವಿಗೆ ಕಾರಣವೆಂದು ಹೇಳಿದರು.

### ಬ್ರೆಟನವುಡ್ಸ ಒಪ್ಪಂದದ ಪ್ರಶ್ನೆ

ಬ್ರೆಟನವುಡ್ಸ ಒಪ್ಪಂದಕ್ಕೆ ಹಿಂದುಸ್ತಾನ ಸರಕಾರ ಸಹಿ ಹಾಕಿದ್ದನ್ನು ಚಿಂತಿಸುವ ಸಲುವಾಗಿ ನೇಮಿಸಲ್ಪಟ್ಟಿದ್ದ ಶಾಸನ ಸಭಾ ಉಪಸಮಿತಿಯವರು ತಮ್ಮ ವರದಿಯನ್ನು ಸಭೆಯ ಮುಂದಿಟ್ಟಿದ್ದಾರೆ. ಹಿಂದುಸ್ತಾನಕ್ಕೆ ಇಂಗ್ಲಂಡಿನಿಂದ ಬರಬೇಕಾದ ಸ್ಟರ್ಲಿಂಗ ಶಿಲ್ಕುಗಳ ವಿಷಯದಲ್ಲಿ ಯೋಗ್ಯ ನಿರ್ಣಯವಾಗುವ ವರೆಗೆ ಬ್ರೆಟನವುಡ್ಸ ಆರ್ಥಿಕ ಒಪ್ಪಂದಕ್ಕೆ ಮಾನ್ಯತೆ ಕೊಡುವದು ಯೋಗ್ಯವಲ್ಲ. ಸ್ಟರ್ಲಿಂಗ ಶಿಲ್ಕಿನ ಪ್ರಶ್ನೆ ಸಮಾಧಾನಕರವಾಗಿ ಬಗೆಹರಿಯದಿದ್ದರೆ ಬ್ರೆಟನವುಡ್ಸ ಒಪ್ಪಂದದಲ್ಲಿ ಭಾಗಿಯಾಗಿ ಹಿಂದುಸ್ತಾನಕ್ಕೆ ಲಾಭವಿಲ್ಲ. ಸ್ಟರ್ಲಿಂಗ್ ಶಿಲ್ಕುಗಳನ್ನು ಇಳಿಸುವದಿಲ್ಲವೆಂದು ಬ್ರಿಟನದಿಂದ ಕಟ್ಟುನಿಟ್ಟಿನ ಆಶ್ವಾಸನ ಬೇಕು; ಇದೂ ಅಲ್ಲದೆ ಬ್ರಿಟನಕ್ಕೆ ರೂಪಾಯಿಗಳನ್ನು ಪೂರೈಸಿ ಸ್ಟರ್ಲಿಂಗ ಶಿಲ್ಕನ್ನು ಪಡೆಯಲು ರಿಝರ್ವ ಬ್ಯಾಂಕನ್ನು ಬದ್ಧವಾಗಿ ಮಾಡುವ ೧೯೩೪ರ ಕಾಯದೆ ಹೋಗಿ ಸ್ಟರ್ಲಿಂಗ್ ಶಿಲ್ಕುಗಳ ಅನಿಯಮಿತ ಏರಿಕೆಯನ್ನು ಮೊದಲು ನಿಲ್ಲಿಸಬೇಕು ಎಂದು ಆ ವರದಿ ಸೂಚಿಸುತ್ತದೆ.

### ಪ್ರಶ್ನೋತ್ತರಗಳು

ಜಯಪ್ರಕಾಶ ನಾರಾಯಣರ ಪ್ರಕರಣವನ್ನು ಇನ್ನೂ ಪರಿಶೀಲಿಸಲಾಗುತ್ತಿದೆ. ಫಾರ್ವರ್ಡ ಬ್ಲಾಕ್ ಮೇಲಿನ ನಿರ್ಬಂಧ ಹಿಂತೆಗೆದುಕೊಳ್ಳುವ ನಿರ್ಣಯವಾಗಿಲ್ಲ. ಕಾಂಗ್ರೆಸ ಸಾಮ್ಯವಾದಿ ಪಕ್ಷದ ಮೇಲಿನ ನಿರ್ಬಂಧ ಪ್ರಾಂತಿಕ ಸರಕಾರಗಳು ಹೇರಿದ್ದು ಅದನ್ನು ಹಿಂತೆಗೆದುಕೊಳ್ಳುವ ವಿಚಾರ ನಮಗೆ ಗೊತ್ತಿಲ್ಲವೆಂದು ಸತ್ಯನಾರಾಯಣ ಸಿಂಹರಿಗೆ ತಿಳಿಸಲಾಯಿತು.

ನಿಜಾಂ ಪ್ರದೇಶದಿಂದ ಮುಛಲಿಪಟ್ಟಣಕ್ಕೆ ಹೆದ್ದಾರಿಯನ್ನು ಕೇಳುವ ವಿನಂತಿ ನಿಜಾಂ ಸರಕಾರ ಇಲ್ಲವೆ ಯಾವದೇ ಖಾಸಗಿ ಸಂಸ್ಥೆಯಿಂದ ಬ್ರಿಟಿಶ ಅಥವಾ ಹಿಂದುಸ್ತಾನ ಸರಕಾರಕ್ಕೆ ಬಂದಿಲ್ಲವೆಂದು ಪ್ರೊ. ರಂಗಾ ಅವರಿಗೆ ತಿಳಿಸಲಾಯಿತು.

ಹಿರಿನೋಟ್ಟುಗಳ ರದ್ದು ಆರ್ಡಿನನ್ಸದ ಫಲವಾಗಿ ೧೧೭.೫೫ ಕೋಟಿ ರೂಪಾಯಿಗಳ ನೋಟುಗಳು ಬದಲಿಸಲ್ಪಟ್ಟಿವೆಯೆಂದು ಮನುಸುಬೇದಾರರಿಗೆ ಉತ್ತರ ಬಂತು.

### ದಕ್ಷಿಣ ಕನ್ನಡ

ಕರ್ನಾಟಕದ ಕಾಂಗ್ರೆಸ್ ಮುಂದಾಳುಗಳೂ ಹಿಂದುಸ್ತಾನೀ ಸೇವಾದಲದ ಸಂಸ್ಥಾಪಕರೂ ಆದ ಡಾ. ಎಸ್. ಎಚ್. ಹರ್ಡಿಕರರು ದಕ್ಷಿಣ ಕನ್ನಡ ಜಿಲ್ಹೆಯ ಎಲ್ಲ ತಾಲೂಕುಗಳಲ್ಲಿ ಕಾಂಗ್ರೆಸ ಚುನಾವಣೆಯ ಪ್ರಚಾರ ನಿಮಿತ್ತ ಸಂಚರಿಸಿ ಭಾಷಣ ಕೊಟ್ಟರು. ಕಾಂಗ್ರೆಸ್ ಸಂಘಟನೆ, ರಾಷ್ಟ್ರೀಯ ಸ್ವಯಂಸೇವಕ ದಲದ ಅವಶ್ಯಕತೆ ಮೊದಲಾದುದನ್ನು ಕುರಿತು ಅವರು ಭಾಷಣ ಮಾಡಿದರು. ಮಂಗಳೂರು ಪತ್ರಿಕೋದ್ಯಮಿಗಳು ತಾ. ೧೯ಕೆ ಅವರಿಗೆ ಸತ್ಕಾರ ಏರ್ಪಡಿಸಿದ್ದರು. ಡಾ. ಹರ್ಡಿಕರರು ತಾ. ೨೪ಕ್ಕೆ ಮರಳಿ ಹುಬ್ಬಳ್ಳಿಗೆ ಬಂದು ಸೇರಿದರು.

ಉಡುಪಿಯ ಕಲಾವೃಂದ ಸಂಸ್ಥೆಯನ್ನು ಸಂದರ್ಶಿಸಿ ಮದ್ರಾಸಿನ ಪ್ರಮುಖ ಹಾಟೇಲ ಉದ್ಯಮಿಗಳಾದ ಶ್ರೀ. ಸೀತಾರಾಮಾಚಾರ್ಯ, ಹಯಗ್ರೀವಾಚಾರ್ಯ ಹಾಗು ಗೋಪಾಲಾಚಾರ್ಯರು ಸಂಸ್ಥೆಗೆ ಸಹಾಯಧನವೆಂದು ೧೦೦ ರೂಪಾಯಿ ದಾನ ಮಾಡಿದ್ದಾರೆ.

ಮುಂಬೈ ಶಾಸನ ಸಭಾ ಚುನಾವಣೆ

೧೧-೩-೪೬ ಕ್ಕೆ

★

ಕಾಂಗ್ರೆಸ ಹುರಿಯಾಳುಗಳಿಗೇ

ನಿಮ್ಮ

ಎಲ್ಲ ಮತಗಳನ್ನು ಕೊಡಿರಿ

★

ಏಕೆಂದರೆ

ಕಾಂಗ್ರೆಸ್ಸಿಗೆ ಮತವೆಂದರೆ

ಸ್ವಾತಂತ್ರ್ಯಕ್ಕೆ ಮತ

## ೧೯೪೫-೪೬ ರಲ್ಲಿ ೧೪೫ ಕೋಟಿ; ೧೯೪೬-೪೭ ರಲ್ಲಿ ೪೯॥ ಕೋಟಿ (ಕೊರತೆ)

### ಕೇಂದ್ರ ಆಯವ್ಯಯ ಪತ್ರಿಕೆಯ ಮುಖ್ಯಾಂಶಗಳು

#### ದೇಶಿ ಅಡಿಕೆಗೆ ರಕ್ಷಣೆ

ಫೆ. ೨೮ ಕ್ಕೆ ಆರ್ಥಿಕ ಮಂತ್ರಿ ಸರ್ ಆರ್ಚಿಬಾಲ್ಡ ರೌಲಂಡ್ಸರು ಕೇಂದ್ರ ಶಾಸನ ಸಭೆಯಲ್ಲಿ ಹಣಕಾಸಿನ ಮಸೂದೆಯನ್ನು ಮಂಡಿಸಿದರು.

ನಡೆಯುತ್ತಿರುವ (೧೯೪೫–೪೬) ವರ್ಷದಲ್ಲಿ ಕಳೆದ ವರ್ಷದ ಅಂದಾಜು ಪತ್ರಿಕೆಯಲ್ಲಿನ ಅಂದಾಜಿಗಿಂತ ಕಡಿಮೆ ಕೊರತೆ ಬರುವದು. ಮೂಲ ಅಂದಾಜಿನಂತೆ ೧೫೫.೨೯ ಕೋಟಿ ಕೊರತೆ ಬರಬೇಕಾಗಿದ್ದರೆ ತಿದ್ದಿದ ಅಂದಾಜಿನಂತೆ ಬರಿ ೧೪೪.೯೫ ಕೋಟಿ ರೂಪಾಯಿ ಮಾತ್ರ ಕೊರತೆ ಬರುವದು.

೧೯೪೬–೪೭ ರಲ್ಲಿ ಆಯ ೩೦೭ ಕೋಟಿ (ಸದ್ಯದ ತೆರಿಗೆಯ ಪ್ರಮಾಣದಲ್ಲಿ) ವ್ಯಯ ೩೫೫.೭೧ ಕೋಟಿ, ಕೊರತೆ ೪೮.೭೧ ಕೋಟಿಯೆಂದು ರೌಲಂಡ್ಸರು ಅಂದಾಜು ಮಾಡಿದ್ದಾರೆ.

೧೯೪೫–೪೬ರ ಸಂರಕ್ಷಣವೆಚ್ಚ ೩೭೬.೪೨ ಕೋಟಿಯೆಂದು ತಿದ್ದಿದ ಅಂದಾಜು. ೧೯೪೬–೪೭ ಕ್ಕೆ ಅದು ೨೪೩.೭೭ ಕೋಟಿಯಾದೀತು.

ಬೇಗನೆ ಅಧಿಕಾರೇತರರೇ ಹೆಚ್ಚಾಗಿರುವ ತೆರಿಗೆ ವಿಚಾರಣಾ ಸಮಿತಿಯೊಂದನ್ನು ನಿರ್ಮಿಸುವದಾಗಿ ರೌಲಂಡ್ಸರು ತಿಳಿಸಿದರು.

ಅಧಿಕ ಲಾಭದ ತೆರಿಗೆಯನ್ನು ಇದೇ ಮಾರ್ಚ ೩೧ ರಿಂದ ನಿಲ್ಲಿಸಲಾಗುವದು.

ವಿದೇಶಿ ಅಡಿಕೆಯ ಆಯಾತದ ಮೇಲಿನ ಸುಂಕವನ್ನು ಪೌಂಡಿಗೆ ೫॥ ಆಣೆಗೇರಿಸಲಾಗುವದು.

ಚಿನ್ನ ಗಟ್ಟಿ ಮತ್ತು ನಾಣ್ಯಗಳ ಮೇಲೆ ತೊಲೆಗೆ ೨೫ ರೂಪಾಯಿ ಸುಂಕ ಹೊರಿಸಲಾಗುವದು. ಬೆಳ್ಳಿಯ ಮೇಲಿನ ಸುಂಕವನ್ನು ೩ ಆಣೆ ೭–೧/೫ ಪೈ ಯಿಂದ ೮ ಆಣೆಗೇರಿಸಲಾಗುವದು.

೧೫ ಸಾವಿರದ ವರೆಗಿನ ಉತ್ಪನ್ನದ ಆದಾಯ ತೆರಿಗೆಯನ್ನು ಈಗಿರುವ ದರಗಳಿಗಿಂತ ರೂಪಾಯಿಗೆ ೩ ಪೈಯಂತೆ ಕಡಿಮೆ ಮಾಡಲಾಗುವದು. ಮೊದಲಾಗಿ ಹೊಸ ತೆರಿಗೆ ಸೂಚನೆಗಳು ರೌಲಂಡ್ಸರ ಹಣಕಾಸಿನ ಮಸೂದೆಯಲ್ಲಿವೆ.

### ಕ್ಯಾ. ಲಕ್ಷ್ಮಿಯವರು ಹಿಂದುಸ್ತಾನಕ್ಕೆ

ಸುಭಾಸ ಚಂದ್ರರ ಆಝಾದ ಹಿಂದ ಸೈನ್ಯದ ಝಾಂಸಿ ರಾಣಿ ದಲದ ಪ್ರಸಿದ್ಧ ಕ್ಯಾಪ್ಟನ್ ಲಕ್ಷ್ಮಿ ಅವರನ್ನು ರಂಗೂನದಿಂದ ವಿಮಾನದಲ್ಲಿ ಕರೆತಂದು ಕಲಕತ್ತೆಯಲ್ಲಿ ಬಿಡುಗಡೆಮಾಡುವರೆಂದು ತಿಳಿದು ಬಂದಿದೆ. ಅವರೀಗ ಕಲೇವಾದಲ್ಲಿದ್ದು ಅವರ ಚಟುವಟಿಕೆಗಳ ಮೇಲೆ ನಿರ್ಬಂಧವಿದೆ.

## ಬೆಂಗಳೂರಲ್ಲಿ

ಮೈಸೂರು ಸಂಸ್ಥಾನದ ಆಹಾರ ನಿರ್ದೇಶಕರಾದ ಶ್ರೀ ಸುಂದರರಾಯರು ಪತ್ರಿಕೋದ್ಯಮಿಗಳ ಸಭೆಯೊಂದನ್ನು ಕರೆದು ಸಂಸ್ಥಾನದ ಆಹಾರ ಪರಿಸ್ಥಿತಿಯನ್ನು ವಿವರಿಸಿದರು. ಸಂಸ್ಥಾನಕ್ಕೆ ಈ ವರ್ಷ ೩ ಲಕ್ಷ ಟನ್ ಆಹಾರ ಕೊರತೆ ಬೀಳುತ್ತಿರುವದರಿಂದ ಎಲ್ಲರೂ ಆಹಾರದಲ್ಲಿ ಮಿತವ್ಯಯ ಮಾಡಬೇಕೆಂದು ಅವರು ವಿನಂತಿ ಮಾಡಿಕೊಂಡರು. ಸಂಸ್ಥಾನದ ೧೦ ಮುಖ್ಯ ನಗರಗಳಲ್ಲಿ ಸೀದಾ ಪದ್ಧತಿ ಆರಂಭಿಸುವ ಮೂಲಕ ೮೦ ಲಕ್ಷ ಪ್ರಜೆಗಳಲ್ಲಿ ೧೦೦ ಕ್ಕೆ ೧೨॥ ಜನರನ್ನು ಸೀದಾ ಶಾಸನದ ಕೆಳಗೆ ತರಲಾಗಿದೆ. ಸಂಸ್ಥಾನದಲ್ಲಿ ಸೀದಾ ಪ್ರಮಾಣದಲ್ಲಿ ಕಡಿತ ಮಾಡಿದ್ದರಿಂದ ೨-೩ ಸಾವಿರ ಟನ್ ಆಹಾರ ಉಳಿಯಬಹುದೆಂದು ಅವರು ಹೇಳಿದರು. ರೈತರಿಂದ ವಶಪಡಿಸಿಕೊಂಡ ಆಹಾರ ಧಾನ್ಯಗಳ ಮತ್ತು ಹೊರಗಿನಿಂದ ತರಿಸಿದ ಧಾನ್ಯಗಳ ಅಂಕೆಸಂಖ್ಯೆಗಳನ್ನೂ ಅವರು ಕೊಟ್ಟರು.

ಮಹಾರಾಣಿ ಕಾಲೇಜ ಸಂಘದ ವಾರ್ಷಿಕೋತ್ಸವ ತಾ ೧೯ ಕ್ಕೆ ಬೆಂಗಳೂರು ನಗರ ಭವನದಲ್ಲಿ ಶಾತಾ ವಿಜ್ಞಾನ ಮಂದಿರದ ನಿರ್ದೇಶಕ ಸರ್ ಜೆ. ಸಿ. ಘೋಷರ ಅಧ್ಯಕ್ಷತೆಯಲ್ಲಿ ಸಾಂಗವಾಯಿತು.

ಮೈಸೂರು ನಗರ ಸಭೆಯ ವಿಶೇಷ ಅಧಿವೇಶನವೊಂದು ತಾ ೧೯ ಕ್ಕೆ ಸೇರಿತು. ನಗರದ ಸೀದಾಧಿಕಾರಿ ಶ್ರೀ ವೆಂಗಟಶಿವ ರೆಡ್ಡಿಯವರು ಸಭೆಯ ಮುಂದೆ ನಗರದ ಆಹಾರಪರಿಸ್ಥಿತಿಯನ್ನು ವಿವರಿಸಿದರು. ಸುಧಾರಣೆಗಾಗಿ ಸರಕಾರಕ್ಕೆ ಸೂಚನೆಗಳನ್ನು ಕೊಡುವ ಹಲನಿರ್ಣಯಗಳು ಸ್ವೀಕರಿಸಲ್ಪಟ್ಟವು.

ಮೈಸೂರು ಮಹಾರಾಜಾ ಕಾಲೇಜಿನ ರಾಜಕಾರಣದ ಶಾಸ್ತ್ರದ ಸಹಾಯಕ ಅಧ್ಯಾಪಕರಾಗಿರುವ ಶ್ರೀ ಎಚ್ ಕೃಷ್ಣರಾಯರು ಸೇವಾ ನಿವೃತ್ತರಾಗಲಿರುವದರಿಂದ ಅವರನ್ನು ಬೀಳ್ಕೊಡುವ ಸಮಾರಂಭವೊಂದು ಕಾಲೇಜಿನ ರಾಜಕಾರಣ ಸಂಘದ ಆಶ್ರಯದಲ್ಲಿ ಫೆ. ೧೯ ಕ್ಕೆ ಜರಗಿತು. ಶ್ರೀ ಕೃಷ್ಣರಾಯರ ಭಾವಚಿತ್ರದ ಅನಾವರಣ ಪ್ರೊ. ಡಿಸೋಜಾರ ಹಸ್ತದಿಂದ ಆಯಿತು. ಸಹಯೋಗಿಗಳು ಶ್ರೀ ಕೃಷ್ಣರಾಯರ ಗುಣಗಾನ ಮಾಡಿದರು.

ಆಧುನಿಕ ಕನ್ನಡ ಸಾಹಿತ್ಯದ ಆರಂಭದಶೆಯಲ್ಲಿ ಸಂಸ್ಕೃತ, ಬಂಗಾಲಿ, ಹಿಂದೀ ತಮಿಳು ಭಾಷೆಗಳಿಂದ ಹಲವು ಗ್ರಂಥಗಳನ್ನು ಕನ್ನಡಿಸಿ ಸಾಹಿತ್ಯ ಸೇವೆ ಮಾಡಿರುವ ಶ್ರೀ ಎಸ್ ಜಿ. ಗೋವಿಂದರಾಜ ಅಯ್ಯಂಗಾರರು ತಾ ೨೧ ಕ್ಕೆ ಬೆಂಗಳೂರು ವಿಕ್ಟೋರಿಯಾ ಆಸ್ಪತ್ರೆಯಲ್ಲಿ ೭೧ ನೇ ವಯಸ್ಸಿನಲ್ಲಿ ಕಾಲವಶರಾದರೆಂದು ತಿಳಿಸಲು ವಿಷಾದವಾಗುತ್ತದೆ.

ಚಾಮರಾಜನಗರದ ನಗರ ಸಭೆಗೆ ತನ್ನ ಅಧ್ಯಕ್ಷನನ್ನು ಆರಿಸಿಕೊಳ್ಳುವ ಅಧಿಕಾರವನ್ನು ಮೈಸೂರ ಸರಕಾರ ಕೊಟ್ಟಿದೆ. ಈ ವರೆಗೆ ಈ ಸಭೆಗೆ ಸರಕಾರದವರೇ ಅಧ್ಯಕ್ಷರನ್ನು ನಿಯೋಜಿಸುತ್ತಿದ್ದರು.

ಮೈಸೂರ ಹಾಯಕೋರ್ಟಿನ ನ್ಯಾಯಾಧೀಶರಾದ ಶ್ರೀ ಎಸ್ ವೆಂಕಟರಂಗ ಅಯ್ಯಂಗಾರರ ಅಧಿಕಾರಾವಧಿಯನ್ನು ೧೯೪೭ ಮೇ ವರೆಗೆ ೧ ವರ್ಷ ಬೆಳೆಸಲಾಗಿದೆ.

ಜಿಲ್ಲೆಯಲ್ಲಿ ಬರಗಾಲದಿಂದ ಸಂತಸ್ತರಾದವರಿಗೆ ಪರಿಹಾರ ನೀಡುವ ಸಲುವಾಗಿ ಮೈಸೂರು ಸರಕಾರದವರು ಚಿತ್ರದುರ್ಗ ಜಿಲ್ಲೆಯ ಅಂತರ್‌ಗ್ರಾಮ ಕಾಮಗಿರಿ ಮತ್ತು ಗ್ರಾಮಾಭಿವೃದ್ಧಿ ಕಾರ್ಯಗಳಿಗೆ ೧,೫೫,೦೦೦ ರೂ. ಹೆಚ್ಚಿನ ಸಹಾಯವನ್ನು ಮಂಜೂರು ಮಾಡಿದ್ದಾರೆ.

ಮೈಸೂರು ಆರೋಗ್ಯ ಮಂತ್ರಿ ಡಾ. ರಾಯಣ್ಣರು ತಾ ೨೨ ಕ್ಕೆ ಬೆಂಗಳೂರು ದಕ್ಷಿಣ ತಾಲೂಕಿನಲ್ಲಿ ಸಂಚರಿಸಿ ಹಲವು ಹರಿಜನ ವಸತಿಗಳಿಗೆ ವಿಶೇಷ ಆಸ್ಥೆಯಿಂದ ಭೆಟ್ಟಿ ಕೊಟ್ಟರು. ಹರಿಜನರಿಗೆ ಸ್ವಚ್ಛತೆ ಶಿಕ್ಷಣಗಳ ಸಂಬಂಧದಲ್ಲಿ ಉಪದೇಶಗಳನ್ನು ಕೊಟ್ಟದ್ದಲ್ಲದೆ ಹರಿಜನರ ಪುರೋಭಿವೃದ್ಧಿಗಾಗಿ ದುಡಿಯುವದು ತಮ್ಮ ಮುಖ್ಯ ಮಂತವೆಂದು ಸಾರಿದರು.

ಹಿಂದುಸ್ಥಾನ ಸರಕಾರದ ಜವಳಿ ಕಮೀಶನರ ಶ್ರೀ ಧರ್ಮವೀರರು ಸಂಸ್ಥಾನದ ನಾಗರಿಕ ಪೂರೈಕೆ ಅಧಿಕಾರಿಗಳೊಡನೆ ತಾ ೨೨ ಕ್ಕೆ ಮೈಸೂರು ನಗರಕ್ಕೆ ಬರದು ನಗರದ ಬಟ್ಟೆ ತೊಂದರೆಗಳ ವಿಷಯಕವಾದ ದೂರುಗಳನ್ನು ಕೇಳಿಕೊಂಡು ಹೋದರು.




### ಮುಂಬಯಿ ಶೇರ ಪೇಟೆ

ಮುಂಬಯಿ ಪೇಟೆಯಲ್ಲಿ ಎಲ್ಲ ಕಣ್ಣು ಕೇಂದ್ರ ಆಯವ್ಯಯ ಪತ್ರಿಕೆಯ ಕಡೆಗೆ ಹೊರಳಿವೆ. ಆದುದರಿಂದ ವ್ಯಾಪಾರದಲ್ಲಿ ಬಹಳ ಭರಾಟವಿಲ್ಲ. ಟಾಟಾ ಡೆಫರ್ಡ ಪಾಲುಗಳು ೨೮೪೭—೮—೦ ರ ವರೆಗೆ ಹೋಗಿ ಮತ್ತೆ ೨೮೩೦—೦—೦ ಕ್ಕಿಳಿದವು. ಆದರೆ ಡಾಯಿಂಗ ಪಾಲುಗಳು ೨೨೨೨—೮—೦ ಕ್ಕೇರಿವೆ. ಸ್ವದೇಶಿ ೬೭೫—೦-೦ ರಿಂದ ೬೭೭-೨-೦ ಕ್ಕೂ ಸೆಂಚೂರಿ ೯೪೫—೦—೦ ರಲ್ಲಿ ಯಥಾಸ್ಥಿತಿ, ಸೆಂಟ್ರಲ್ ಇಂಡಿಯಾ ೪೪೪—೦—೦ ರಿಂದ ೪೬೧—೦—೦ ಕ್ಕೆ ಬೇಲಾಪೂರ ೨೪೬—೮—೦ ರಿಂದ ೨೪೯—೮—೦ ಕ್ಕೆ ಅಸೋಸಿಯೆಟೆಡ್ ಸಿಮೆಂಟ್ಸ ೨೩೫—೮—೦ ರಿಂದ ೨೩೮—೦-೦ ಕ್ಕೆ ಏರಿದವು. ಸೆಂಟ್ರಲ್ ಬ್ಯಾಂಕು ತುಸು ಏರಿ ೧೮೯—೮-೦ ಕ್ಕೆ ಮುಟ್ಟಿತು. ಇಂಪೀರಿಯಲ್ ಬ್ಯಾಂಕ ಎಫ್ ಸಿಗೆ ಬಹಳ ಬೆಂಬಲವಿಲ್ಲದೆ ೨೩೯೭—೮—೦ ರಲ್ಲಿದೆ. ರಿಝರ್ವ ಬ್ಯಾಂಕ ೧೫೬—೮-೦ ರಲ್ಲಿ ಇದ್ದಂತೆಯೆ ಇದೆ.

ಜಿ. ಪಿ. ನೋಟುಗಳು ಕಳೆದ ವಾರಾಂತ್ಯದಲ್ಲಿ ೧೦೩—೦-೦ ಕ್ಕಿಂತ ಇಳಿದು ಹೋದವು. ಈ ವಾರ ತುಸು ಬೆಂಬಲ ಪಡೆದು ೧೦೩—೩—೦ ಕ್ಕೆ ಬಂದವು. ೩॥ ದರ ೧೯೪೭-೫೦ ರ ಭದ್ರತೆ ರೂ. ೧೦೩-೬-೦; ೩॥ ದರ ೧೯೫೦ ರದು ೧೦೧—೨-೦

### ಚಿನ್ನ—ಬೆಳ್ಳಿ

ಚಿನಿವಾರಕಟ್ಟೆಯ ವಾಯಿದಾ ವ್ಯಾಪಾರವನ್ನು ನಿಯಂತ್ರಿಸಿದ್ದ ಕಾಯಿದೆಯನ್ನು ಸರಕಾರದವರು ಹಿಂತೆಗೆದುಕೊಂಡಿದ್ದಾರೆ. ಆದುದರಿಂದ ಚಿನ್ನ-ಬೆಳ್ಳಿಗಳೆರಡರಲ್ಲಿಯೂ ಮಾರುವವರ ಒತ್ತಾಟ ಹೆಚ್ಚಾಯಿತು. ಸೋಮವಾರ ದಿನ ಈ ಸುದ್ದಿ ಪ್ರಕಟವಾದೊಡನೆ ಬೆಳ್ಳಿಯ ಮೇಲೆ (೧೦೦ ತೊಲೆಗೆ) ೬ ರೂಪಾಯಿಯಷ್ಟು ಇಳಿದುದಲ್ಲದೆ ಚಿನ್ನದ್ದು ರೂ. ೮೪—೮-೦ ರ ವರೆಗೂ ಇಳಿದು ಹೋಯಿತು. ಬಳಿಕ ತಯಾರಿ ಬೆಳ್ಳಿ ೧೪೧-೯-೦ ರಿಂದ ೧೪೩—೮-೦ ಕ್ಕೂ ತಯಾರಿ ಚಿನ್ನ ೮೬-೧೪-೦ ಕ್ಕೂ ಸುಧಾರಿಸಿತು. ವಾಯಿದಾ ಚಿನ್ನ ೮೪—೬—೦ ಸಾವರಿನ ೬೨-೦-೦.

### ಅರಳೆ ಪೇಟೆ

ಗುಜರಾತದ ಕೆಲ ಭಾಗದಲ್ಲಿ ಮಳೆಯಿಂದ ಹತ್ತಿ ಬೆಳೆ ಕೆಡುವದೆಂಬ ಸುದ್ದಿಯಿಂದ ಸೋಮವಾರ ಅರಳೆ ಪೇಟೆಯಲ್ಲಿ ಬೆಲೆ ಏರಿದವು. ಮಾರ್ಚ ವಾಯಿದೆ ಸೋಮವಾರ ರೂ. ೪೬೫-೧೨-೦ ಮತ್ತು ಮಂಗಳವಾರ ೪೬೭—೮—೮ ಕ್ಕೆ ಹೋಯಿತು. ಆದರೆ ಮುಂದೆ ಹಿಂದೇಟು ಬಿದ್ದು ರೂ. ೪೬೧-೦-೦ ಕ್ಕೆ ಮರಳಿತು. ಮೇ ವಾಯಿದೆ ೪೬೭-೦-೦ ಜುಲೈ ೪೭೬—೮—೦ ಸೆಪ್ಟೆಂಬರ ೪೮೧—೮-೦.

### ಎಣ್ಣೆಕಾಳು

| | | |
|---|---|---|
| ಶೇಂಗಾ | ರೂ. | ೧೦೭—೮—೦ |
| ಅಗಸಿ | ,, | ೨೨-೨—೦ |
| ಅಗಸಿಎಣ್ಣೆ | ,, | ೧೩—೬—೦ |

### ಶಿವಮೊಗ್ಗೆ

ಶಿವಮೊಗ್ಗೆ ಅಡಕೆ ಪೇಟೆಯಲ್ಲಿ ಕಳೆದ ವಾರಕ್ಕಿಂತ ಏನೂ ಸ್ಥಿತ್ಯಂತರವಾಗಿಲ್ಲ. ನಿರ್ಯಾತ ಸೌಕರ್ಯದ ಅಭಾವದಿಂದ ವ್ಯಾಪಾರದಲ್ಲಿ ತೊಡಕುಂಟಾಗಿದೆ.

### ಸಾಂಗಲಿ ಪೇಟೆ

| | | | |
|---|---|---|---|
| ಬೆಲ್ಲಬಂಗಾಲಿಮಣ | ರೂ. | ೧೪ | — ೧೬ |
| ಅರಿಸಿಣ ಹೇರು | ,, | ೬೨ | — ೭೦ |
| ಮೆಣಸಿನಕಾಯಿ | ,, | ೧೬೦ | — ೧೮೫ |
| ಶೇಂಗಾ (ಖಂಡಿ) | ,, | ೯೦— | ೯೨ |
| ಶೇಂಗಾ ಎಣ್ಣೆ (ಮಣ) | | ೧೨—೬—೦ | |
| ದೇಶಿ ತಂಬಾಕು (ಹೇರು) | | ೧೦೦ | — ೧೭೫ |

### ಹುಬ್ಬಳ್ಳಿ ಪೇಟೆ

| | |
|---|---|
| ಜಯವಂತಿ ಹತ್ತಿ ನಂ. ೧ | ೩೧೦—೩೨೫ |
| ಜಿನ | ೨೦೦-೨೨೦ |
| ಅ. ಡಬಲರೋಲರ | ೧೮೦-೨೦೦ |

## ಹಿಂದುಸ್ಥಾನದಲ್ಲಿ ಹಾಲಿನ ಉತ್ಪಾದನೆ ಮತ್ತು ಹಂಚಿಕೆ

### ೧೩ ಮುಖ್ಯ ಲೋಪದೋಷಗಳು

ಹಿಂದುಸ್ಥಾನದಲ್ಲಿ ಹಾಲಿನ ಉತ್ಪಾದನೆ ಮತ್ತು ಹಂಚಿಕೆಗಳಲ್ಲಿ ೧೩ ಮುಖ್ಯ ಲೋಪದೋಷಗಳಿವೆಯೆಂದು ಬ್ರಿಟನದ ಹಾಲಿನ ಅಧಿಕಾರಿ ರಾಬರ್ಟ ಪೆಪ್ಪರಾಲ್‌ರವರು ಸೂಚಿಸಿರುವರು. ಹಿಂದುಸ್ಥಾನದಲ್ಲಿ ಹಾಲಿನ ಉತ್ಪಾದನ ಮತ್ತು ಹಂಚಿಕೆಗಳ ವ್ಯವಸ್ಥೆಯ ಬಗ್ಗೆ ಅವರು ೪ ತಿಂಗಳುಗಳ ವರೆಗೆ ವಿಚಾರಣೆ ನಡೆಸಿ ಹಿಂದುಸ್ಥಾನ ಸರಕಾರದ ಆರೋಗ್ಯ ಮತ್ತು ಶಿಕ್ಷಣ ಮಂತ್ರಿಗಳಾದ ಸರ್ ಜೋಗೇಂದ್ರಸಿಂಹರವರಿಗೆ ವಿಸ್ತೃತವಾದ ಒಂದು ವರದಿಯನ್ನೊಪ್ಪಿಸಿರುವರು. ೧ ದನಕರುಗಳ ಅರೆಹೊಟ್ಟೆಯಿಂದಿವೆ. ೨ ಪ್ರಾಣಿಗಳ ಪಾಲನೆ ವ್ಯವಸ್ಥೆ ತೀರಕೆಟ್ಟಿದೆ. ೩ ಹಾಲಿನ ಉತ್ಪಾದನ ಕಡಿಮೆಯಾಗುತ್ತ ಬರುತ್ತದೆ. ೪ ಮಾನವೀ ಜನಸಂಖ್ಯೆ ಏರುತ್ತಿದೆ. ೫ ಹಾಲಿನ ಉತ್ಪಾದಕರು ನಿರಕ್ಷರಕುಕ್ಷಿಗಳು, ಸಾಲದಲ್ಲಿ ಮುಳುಗಿದವರು ಮತ್ತು ದರಿದ್ರರು. ೬ ಜಗತ್ತಿನಲ್ಲೇ ಇಷ್ಟು ಏರಿಕೆಯು ಬೆಲೆ ಬೇರೆ ಯಾವ ರಾಷ್ಟ್ರದಲ್ಲಿಯೂ ಇಲ್ಲ. ೭ ಜನರ ಸರಾಸರಿ ಉತ್ಪನ್ನವು ಜಗತ್ತಿನೆಲ್ಲ ರಾಷ್ಟ್ರಗಳಗಿಂತ ಕನಿಷ್ಟ, ೮ ಹಾಲಿಗೆ ನೀರು ಬೆರೆಯುವರು, ೯ ಶುಚಿತ್ವದ ದೋಷ ೧೦ ಲಂಚಗುಳಿತನ ಅಪ್ರಾಮಾಣಿಕತನದ ಕೊರತೆ, ೧೧ ಸಾರ್ವಜನಿಕರ ಉದಾಸೀನತೆ, ೧೨ ಸ್ಥಳಿಕ ಸಂಸ್ಥೆಗಳು ಕರ್ತವ್ಯವನ್ನು ನೆರವೇರಿಸಲು ತಪ್ಪಿವೆ. ೧೩ ಹಾಲಿನ ಉತ್ಪಾದನೆಯ ಉಪಕರಣಗಳು ಇಲ್ಲವೇ ಇಲ್ಲ.

ಈ ದೋಷಗಳನ್ನು ಪರಿಹರಿಸಲು ಯಾವ ಉಪಾಯಗಳನ್ನು ಕೈಗೊಳ್ಳಬಹುದೆಂದೂ ಪೆಪ್ಪಾರಾಲರು ಸರಕಾರಕ್ಕೆ ಸೂಚಿಸಿದ್ದಾರೆ.

(೧) ಯೋಗ್ಯ ಆಹಾರ ವಸ್ತುಗಳನ್ನು ಪೂರೈಸಿ ದನಕರುಗಳ ಪಾಲನೆಯ ವ್ಯವಸ್ಥೆಯನ್ನು ಸುಧಾರಿಸಬೇಕು. (೨) ಉತ್ಪಾದಕರಿಗೆ ಯೋಗ್ಯ ಹಾಗೂ ಬಸುವವರಿಗೆ ಕನಿಷ್ಠ ಪ್ರಮಾಣದ ಬೆಲೆಯನ್ನು ಗೊತ್ತುಪಡಿಸುವುದವಶ್ಯ.(೩) ಶುಚಿತ್ವ ವ್ಯವಸ್ಥೆ(೪) ದನಕರುಗಳಿಗೆ ಸಾಕಷ್ಟು ಆಹಾರ ಸಿಗುವಂತೆ ಎಣ್ಣೆ ಕಾಳುಗಳ ನಿರ್ಯಾತಕ್ಕೆ ತಡೆ. (೫) ಪ್ರತಿಯೊಂದು ಪ್ರಾಂತದಲ್ಲಿ ಹಾಲಿನ ಡೈರೆಕ್ಟರರೊಬ್ಬರನ್ನು ನೇಮಿಸಬೇಕು. ಮತ್ತು ಅ. ಭಾ. ಕೇಂದ್ರ ಸಮಿತಿಯೊಂದನ್ನು ರಚಿಸಿ ಅ. ಭಾ. ಧೋರಣವನ್ನು ರೂಪಿಸಬೇಕು. (೬) ಫಲವತ್ತಾದ ಪ್ರದೇಶಗಳಲ್ಲಿ ಹಾಲಿನ ಉತ್ಪಾದನೆ.

ಇಂಗ್ಲಂಡಿನಿಂದ ಹಿಂದುಸ್ಥಾನವು ಹಾಲಿನ ತಜ್ಞರೊಬ್ಬರನ್ನು ಕರೆಸಿಕೊಳ್ಳಬೇಕೆಂದೂ ಅವರು ಸೂಚಿಸಿರುವರು. ಈಗಿರುವ ೨೧ ಕೋಟಿ ೯೦ ಲಕ್ಷ ದನಕರುಗಳನ್ನು ೧೦ ವರ್ಷಗಳಲ್ಲಿ ೧೪ ಕೋಟಿಗೆ ಇಳಿಸಬೇಕೆಂದೂ ಅವರು ತಿಳಿಸಿದ್ದಾರೆ. ಹಿಂದುಸ್ಥಾನದಲ್ಲಿ ಹಾಲಿನ ಪರಿಸ್ಥಿತಿಯು ಯುರೋಪಿನಲ್ಲಿದ್ದ ೧೬ನೇ ಶತಮಾನದ ಸ್ಥಿತಿಗತಿಯನ್ನು ತೋರುತ್ತಿದೆಯೆಂದೂ ಅವರು ಉದ್ಗರಿಸಿರುವರು.

---

ಚಿತ್ರದುರ್ಗದಲ್ಲಿ ಸ್ಥಾಪಿತವಾಗಿರುವ ಕ್ಷಾಮನಿವಾರಣಾ ಸಮಿತಿಗೆ ಧರ್ಮಪ್ರಕಾಶ ಶ್ರೀ ದೇವರಾವ ಶಿವರಾಮರು ೧೯೪೬ ಮಾರ್ಚದಿಂದ ಒಂದು ವರ್ಷ ಕಾಲ ತಿಂಗಳಿಗೆ ೫೦೦ ರೂಪಾಯಿಯಂತೆ ಕೊಡಲು ಒಪ್ಪಿದ್ದಾರೆ.

## ಭಾಷ್ಯಂ ಅವರು ಪುನಃ ಕಾರ್ಯಕಾರಿ ಸಮಿತಿಗೆ

### ಮೈಸೂರು ಕಾಂಗ್ರೆಸ್ಸಿನ ಬಿಕ್ಕಟ್ಟು ಬಗೆಹರಿಯಿತು

### ಅಖಿಲ ಮೈಸೂರು ಕಾಂಗ್ರೆಸ್ಸಿನ ಶಿವಮೊಗ್ಗೆ ಅಧಿವೇಶನದ ತೀರ್ಮಾನ

ಬೆಂಗಳೂರು ನಗರ ಸಭೆಯ ಅಧ್ಯಕ್ಷ ಚುನಾವಣೆಯ ಸಂಬಂಧದಲ್ಲಿ ಭಿನ್ನಾಭಿಪ್ರಾಯವುಂಟಾಗಿ ಮೈಸೂರು ಕಾಂಗ್ರೆಸ್ ಕಾರ್ಯಕಾರಿ ಸಮಿತಿಗೆ ಶ್ರೀ ಕೆ. ಟಿ. ಭಾಷ್ಯಂ ಅವರು ಕೊಟ್ಟ ರಾಜೀನಾಮೆ, ಅದರ ಬೆನ್ನಿಗೆ ಬೆಂಗಳೂರು ನಗರ ಸಭೆಯ ೧೩ ಜನ ಕಾಂಗ್ರೆಸ್ ಸದಸ್ಯರು ತಮ್ಮ ಸ್ಥಾನಗಳಿಗೆ ರಾಜೀನಾಮೆಯಿತ್ತದ್ದು ಮತ್ತು ಅದರ ಸಂಬಂಧದಲ್ಲಿ ಉಂಟಾದ ಪ್ರಚಂಡ ಪತ್ರಿಕಾ ವಾಗ್ವಾದಗಳಿಂದ ಮೈಸೂರು ಕಾಂಗ್ರೆಸ್ಸಿನಲ್ಲಿ ಒಡಕುಂಟಾಗುವ ಭಯವಿದ್ದುದರಿಂದ ಅಖಿಲ ಮೈಸೂರು ಕಾಂಗ್ರೆಸ್ ಸಮಿತಿಯ ಅನೇಕ ಸದಸ್ಯರು ಅಪೇಕ್ಷಿಸಿದಂತೆ ಅ. ಮೈ. ಕಾಂ. ಸಮಿತಿಯ ವಿಶೇಷಾಧಿವೇಶನವನ್ನು ಶ್ರೀ ನಿಜಲಿಂಗಪ್ಪನವರ ಅಧ್ಯಕ್ಷತೆಯಲ್ಲಿ ಶಿವಮೊಗ್ಗೆಯಲ್ಲಿ ತಾ. ೨೪ ಕ್ಕೆ ಕೂಡಿಸಲಾಗಿತ್ತು.

ಈ ವಿಶೇಷಾಧಿವೇಶನದಲ್ಲಿ ಉಭಯ ಪಕ್ಷದವರೂ ತಮ್ಮ ನಿಲುಮೆಗಳನ್ನು ವಿಶದೀಕರಿಸಿದರು. ಈ ವಿಷಯದಲ್ಲಿ ೫ ತಾಸುಗಳ ವರೆಗೆ ಚರ್ಚೆ ನಡೆದು ಕೊನೆಯಲ್ಲಿ "ಶ್ರೀ ಭಾಷ್ಯಂ ಅವರನ್ನು ಕಾರ್ಯಕಾರಿ ಸಮಿತಿಯಲ್ಲಿ ಪುನಃ ನೇಮಿಸಿಕೊಳ್ಳಬೇಕೆಂದೂ ಬೆಂಗಳೂರು ನಗರ ಸಭಾ ಸದಸ್ಯರ ಚುನಾವಣೆ ಪ್ರಕರಣವನ್ನು ಮತ್ತೆ ಕಾರ್ಯಕಾರಿ ಸಮಿತಿಯವರೇ ಸೂಕ್ತ ಕಂಡಂತೆ ನಿರ್ಣಯಿಸಬೇಕೆಂದೂ ಈ ಸಭೆಯು ಅಭಿಪ್ರಾಯಪಡುತ್ತದೆ" ಎಂಬ ಗೊತ್ತುವಳಿ ಸರ್ವಾನುಮತದಿಂದ ಅಂಗೀಕರಿಸಲ್ಪಟ್ಟಿತು.

ಸಭೆಯಲ್ಲಿ ಎರಡು ಬಗೆಯ ಅಭಿಪ್ರಾಯಗಳು ಮುಂದೊತ್ತಲ್ಪಟ್ಟಿದ್ದವು. ಈ ವಿಷಯವನ್ನು ಇಲ್ಲಿಯೆ ನಿರ್ಣಯಿಸುವದರಿಂದ ಒಡಕು ಇನ್ನೂ ಹೆಚ್ಚುವ ಸಂಭವವಿರುವದರಿಂದ ಇದನ್ನು ಮಹಾತ್ಮಾ ಗಾಂಧಿಯವರ ಮಧ್ಯಸ್ಥಿಕೆಗೆ ಬಿಟ್ಟುಕೊಡಬೇಕೆಂದು ಶ್ರೀ ಭಾಷ್ಯಂ ಮತ್ತು ಅವರ ಬೆಂಬಲಿಗರು ವಾದಿಸಿದರು. ಶ್ರೀ ಭಾಷ್ಯಂ ಅವರು ಈ ಬಾರಿ ಬೆಂಗಳೂರು ನಗರ ಸಭಾಧ್ಯಕ್ಷತೆ ಬಯಸಿದ್ದ ಶ್ರೀ ಅಜೀಜುಲ್ಲಾ ಬೇಗರನ್ನು ತಾವು ಹಿಂದಿನ ಬಾರಿ ಕಾಂಗ್ರೆಸ್ ಹುರಿಯಾಳಿಗೇ ಮತ ಕೊಡಬೇಕೆಂದು ಒಲಿಸಿದಾಗ, ಮುಂದಿನ ಬಾರಿ ಅವರ ಹುರಿಯಾಳ್ತನಕ್ಕೆ ಕಾಂಗ್ರೆಸ ಬೆಂಬಲದ ಮಾತು ಕೊಟ್ಟಿದ್ದ ಅಂಶವನ್ನು ಸಭೆಯ ಮುಂದಿಟ್ಟಿದ್ದರು. ಕಾರ್ಯಕಾರಿ ಮಂಡಲದ ಬಹುಮತದವರ ಪರವಾಗಿ ಶ್ರೀ ಸುಬ್ರಹ್ಮಣ್ಯಂ ಅವರು, ಅಂಥ ವಾಗ್ದಾನ ಕೊಡುವ ಅಧಿಕಾರ ಭಾಷ್ಯಂ ಅವರಿಗಿದ್ದಿಲ್ಲವೆಂದು ಹೇಳಿದರು. ಹಲವು ವರ್ಷಗಳಿಂದ ಕಾಂಗ್ರೆಸ್ಸಿನ ಸಲುವಾಗಿ "ಅಗ್ನಿ ಕುಂಡದಲ್ಲಿ ಬಿದ್ದು ಹೋರಾಡುತ್ತಿರುವ" ತಮ್ಮ ಮಾನ ಉಳಿಸುವದು ಕಾರ್ಯಕಾರಿ ಮಂಡಲದ ಧರ್ಮವಾಗಿತ್ತೆಂದು ಭಾಷ್ಯಂ ವಾದಿಸಿದರು. ಈ ಪ್ರಕರಣವನ್ನು ಗಾಂಧೀಜಿಯ ವರೆಗೊಯ್ಯುವದು ಮೈಸೂರು ಕಾಂಗ್ರೆಸ್ಸಿನ ಆತ್ಮವಿಶ್ವಾಸ ಹೀನತೆಯ ದ್ಯೋತಕವಾಗಬಹುದಾಗಿ ಇಲ್ಲಿಯೇ ತೀರ್ಮಾನವಾಗಬೇಕೆಂಬ ಅಭಿಪ್ರಾಯಕ್ಕೇ ಹೆಚ್ಚಿನವರ ಬೆಂಬಲವಿದ್ದುದರಿಂದ ಶ್ರೀ ಭಾಷ್ಯಂ ಅವರ ಬೆಂಬಲಿಗರು ತಮ್ಮ ಸೂಚನೆಯನ್ನು ಹಿಂತೆಗೆದುಕೊಂಡದ್ದರಿಂದ ಮೇಲೆ ಹೇಳಿದಂತೆ ತೀರ್ಮಾನವಾಗಿ ಈ ವಿವಾದ ಇಲ್ಲಿಗೇ ಬಗೆಹರಿಯಿತು.

ಅಧ್ಯಕ್ಷ ನಿಜಲಿಂಗಪ್ಪನವರು ಈ ನಿರ್ಣಯದ ಬಗ್ಗೆ ಆನಂದವನ್ನು ಪ್ರದರ್ಶಿಸಿದರು.

---

ಮೈಸೂರ ಸಂಸ್ಥಾನದ ಪತ್ರಿಕೆಗಳಲ್ಲಿ ಆಹಾರದ ಪರಿಸ್ಥಿತಿಯನ್ನು ಹಿಡಿತಕ್ಕೆ ತರುವ ಕೆಲಸದ ಅಂಗವಾಗಿ ಹೆಚ್ಚಿನ ಹಾಟೇಲುಗಳನ್ನು ಮುಚ್ಚಿಸಿಬಿಡಬೇಕೆಂದು ಸರಕಾರಕ್ಕೆ ಒತ್ತಾಯ ಪಡಿಸುವ ಪತ್ರಿಕಾ ಚಳವಳಿ ಸತ್ರವೊಂದು ಪ್ರಾರಂಭವಾಗಿದೆ. ಈ ಬಗ್ಗೆ ಸರಕಾರದವರು ನೇಮಿಸಿದ ಸಮಿತಿಯೂ "ಖೊಟ್ಟಿ" ಹಾಟೇಲುಗಳನ್ನು ಮುಚ್ಚಿಸಿಬಿಡಬೇಕೆಂದು ಸೂಚಿಸಿದೆಯೆಂದು ಸುದ್ದಿ.

ಮೈಸೂರು ಪ್ರಜಾಪ್ರತಿನಿಧಿ ಸಭೆಯ ಆಯವ್ಯಯಾಧಿವೇಶನ ಮೇ ೨೯ ಕ್ಕೆ ಪ್ರಾರಂಭವಾಗುವದು.

# ಮಧ್ಯಪೂರ್ವದಲ್ಲಿ ರಾಜಕೀಯ ಸಮುದ್ರಮಂಥನ

( ಮೊದಲನೆಯ ಪುಟದಿಂದ ಮುಂದುವರಿದುದು )

ಪಾಡದೆ ಬಿಸಿಯಲ್ಲಿ ಮತ್ತು ಜಗತ್ತಿನ ಪಲಿತ ಜನಾಂಗಗಳನ್ನು ತನ ಕಡೆ ಸೆಳೆಯುವ ಆತುರ ದಲ್ಲಿ ಇರಾಣಿನಿಂದ ಝಾರನ ಕಾಲದ ರಶಿಯಾ ಪಡೆದಿದ್ದ ಹಲ ಸವಲತ್ತುಗಳನ್ನು ಕೂಡ ಬಾಲ್ಶೆ ವಿಕ್ ಸರಕಾರ ಪರಿತ್ಯಜಿಸಿಬಿಟ್ಟಿತು.

ಹೀಗೆ ಮೊದಲನೆ ಮಹಾಯುದ್ಧದ ನಂತರದ ಸಮಯದಲ್ಲಿ ಮಧ್ಯಪೂರ್ವದಲ್ಲಿ ಬ್ರಿಟಿಶ ಅಧಿಕಾರಕ್ಕೆ ಪ್ರತಿಹೇಳುವವರಿಲ್ಲದಾದರು. ತುರ್ಕಿ ಸಾಮ್ರಾಜ್ಯದ ವಿರುದ್ಧ ಬಂಡೆದ್ದು ಸ್ವತಂತ್ರದ ಅರಬ ರಾಷ್ಟ್ರೀಯ ಗುಂಪುಗಳ ಮುಂದಾಳುಗಳು ಅಷ್ಟ ರಿಂದಲೆ ಸಂತೃಪ್ತರಾಗಿ ಸಂಪಾದಿಸಿದುದನ್ನು ಗಟ್ಟಿ ಮಾಡಿಕೊಂಡು ತೆಪ್ಪಗೆ ಕುಳಿತರು. ಒಂದು ಕಾಲಕ್ಕೆ ಕ್ರಾಂತಿಕಾರರಾಗಿ ಬ್ರಿಟಿಶ ಸಹಾಯದಿಂದ ತುರ್ಕಿ ಸಾಮ್ರಾಜ್ಯದ ನೊಗದಿಂದ ತಮ್ಮ ದೇಶಗಳನ್ನು ಬಿಡಿಸಿದ ಮುಂದಾಳುಗಳು ಇದೀಗ ಹಣ್ಣು ಮುದಿಯ ಸಂಪ್ರದಾಯವಾದಿ ಜಡತೆಯನ್ನು ಸಂಪಾದಿಸಿದ್ದಾರೆ. ಅವಕ್ಕಿಂತ ಮುಂದೆ ಹೋಗಿ ಮಧ್ಯಯುಗದ ಅಂಧಕಾರದಿಂದ ತಮ್ಮ ಜನರನ್ನು ಹೊರತೆಗೆಯುವದು ಅವರಿಗೆ ಸಾಧ್ಯವೂ ಆಗಲಿಲ್ಲ ಅಂಥ ಪ್ರಯತ್ನವನ್ನು ಅವರ ಬ್ರಿಟಿಶ ಪ್ರಭುಗಳು ಸಹಿಸುವಂತೆಯೂ ಇರಲಿಲ್ಲ. ಅದುದರಿಂದ ಅರಬ ಜಾಗೃತಿ ಅಲ್ಲಿಯೇ ಬಾಡಿಹೋಯಿತು.

## ಪುನಃ ರಶಿಯಾ

ಆದರೆ ಪರಿಸ್ಥಿತಿ ಬೇಗನೆ ಬದಲಾಯಿತು. ಯುರೋಪಿನಲ್ಲಿ ನಡೆಯುತ್ತಿದ್ದ ರಾಜಕೀಯ ಸಮುದ್ರಮಂಥನದ ಗಾಳಿ ಈ ದೇಶಗಳಿಗೂ ಸೋಂಕದೆ ಇರಲಿಲ್ಲ. ಮೇಲಿನ ಮುಂದಾಳುಗಳೇನೋ ಹಾಗೆಯೆ ಉಳಿದರು. ಆದರೆ ಕೆಳಗೆ ಹೊಸ ಯುವಕ ಜನಾಂಗದಲ್ಲಿ ಹೊಸ ಜಾಗೃತಿಯೊಂದು ತಲೆದೋರಿತು. ಮೇಲಿನ ಮುಂದಾಳುಗಳು ಹೊರತೋರಿಕ್ಕಾದರೂ ಬ್ರಿಟಿಶರೊಡನೆ ನಾಟಕೀ ಸ್ನೇಹ ಸಂಬಂಧವನ್ನು ಉಳಿಸಿಕೊಂಡಿದ್ದರೆ ಕೆಳಗಿನ ಯುವಕ ಜನಾಂಗಕ್ಕೆ ಈ ಬ್ರಿಟಿಶರ ಗುರುತೂ ಇಲ್ಲ, ಅವರ ಲಕ್ಷ್ಯವೂ ಇಲ್ಲ. ಪ್ರತಿಯೊಂದೆಡೆಯಲ್ಲಿಯೂ ಯುವಕರಲ್ಲಿ ತೀವ್ರ ಬ್ರಿಟಿಶ ವಿರೋಧಿ ಭಾವನೆ ಬೆಳೆದಿದೆ. ಕಾಯಿರೋದಲ್ಲಿ ನಡೆದ ವಿದ್ಯಾರ್ಥಿಗಳ ಬ್ರಿಟಿಶ ವಿರೋಧಿ ಪ್ರದರ್ಶನ ಇದರ ಒಂದು ನಿದರ್ಶನ ಮಾತ್ರ. ಈ ಹೊಸ ಸತ್ವಗಳಿಗೆ ಸರಿಯಾದ ಮುಂದಾಳ್ತನವಿಲ್ಲ. ಏಕೆಂದರೆ ಕಳೆದ ೨೫ ವರ್ಷಗಳಿಂದ ಈ ...ಗಳ ಅಂತಃಪ್ರವಾಹಗಳ ಗತಿ ಬದಲಿಸಿದಂತೆ ...ಗಳ ಮುಂದಾಳ್ತನದಲ್ಲಿ ಪರಿವರ್ತನೆಯಾಗಿಲ್ಲ. ...ಲೀಗದ ಕಾರ್ಯದರ್ಶಿ ಅಝಾಂ ಬೇ ಹಾಗೂ ಇಜಿಪ್ತದ ರಾಜಾ ಫರೂಕ ಇವರನ್ನು ಬಿಟ್ಟರೆ ರಾಜಕೀಯ ಮುಂದಾಳುಗಳಲ್ಲಿ ಒಂದೇ ಒಂದು ಹೊಸ ಹೆಸರನ್ನು ಕಾಣುವದು ಶಕ್ಯವಿಲ್ಲ. ಹೀಗೆ ಈ ದೇಶಗಳ ರಾಜಕೀಯ ಜನಾಭಿಪ್ರಾಯಕ್ಕೂ ಮುಂದಾಳುಗಳಿಗೂ ನಡುವೆ ಬಹಳ ಅಗಲವಾದೊಂದು ಬಿರುಕು ಉಂಟಾಗಿದೆ.

ಎರಡನೆ ಮಹಾಯುದ್ಧ ಈ ವಿರೋಧಾಭಾಸವನ್ನು ಬೆಳಕಿಗೆ ತಂದಿತು. ಸಂಗಡಲೇ ಅದು ಬ್ರಿಟಿಶ ವಿರೋಧಿಗಳ ಕೈಯನ್ನು ಬಲಗೊಳಿಸಬಲ್ಲ ವಿದೇಶೀ ಸತ್ವಗಳ ಕೈವಾಡವನ್ನು ಪುನರುಜ್ಜೀವಿಸಿತು. ಜರ್ಮನರ ವಿಶ್ವವಿಜಯ ಯೋಜನೆಯ ಅಂಗವಾಗಿ ೧೯೪೧ರಲ್ಲಿ ಇರಾಕದಲ್ಲಿ ರಶೀದ ಅಲ್ಲಿ ಎಬ್ಬಿಸಿದ ಬ್ರಿಟಿಶ ವಿರೋಧಿ ದಂಗೆ ಮಧ್ಯಪೂರ್ವದಲ್ಲಿ ಜರ್ಮನರ ತಂತ್ರ ಎಷ್ಟು ಆಳವಾಗಿ ಬೇರುಬಿಟ್ಟಿತ್ತೆಂದು ತೋರಿಸಿತು. ಕೆಲವು ದಿನಗಳ ಪರಾಜಯದ ನಂತರ ಬ್ರಿಟಿಶರು ರಶೀದ ಅಲ್ಲಿಯನ್ನು ಬಗ್ಗು ಬಡಿಯಲು ಸಮರ್ಥರಾದರು. ಅವರ ಎಣಿ ಗಣಿಗಳೂ ಉಳಿದವು, ಹಿಂದುಸ್ತಾನದ ಮೇಲೊದಗಿದ ಸದ್ಯಃ ಗಂಡಾಂತರವೂ ದೂರಾಯಿತು. ಈ ಘಟನೆಯಿಂದ ಬ್ರಿಟಿಶರೂ ರಶಿಯನ್ನರೂ ಸೇರಿಯೇ ಪಾಠ ಕಲಿತರು. ಅದುದರಿಂದ ಅವರು ಇರಾಣದಲ್ಲಿ ಇರಾಕದ ಪುನರಾವೃತ್ತಿಯಾಗದಂತೆ ತಡೆಯುವ ಸಲುವಾಗಿ, ೧೯೪೧ ಅಗಸ್ಟದಲ್ಲಿ ಯಾವುದೋ ಹಳೆಯ ತುಕ್ಕು ಹಿಡಿದ ಒಪ್ಪಂದದ ಧೂಳು ಜಾಡಿಸಿ ತೋರಿಸಿ, ಉತ್ತರ ಇರಾಣವನ್ನು ರಶಿಯನ್ನರೂ ದಕ್ಷಿಣವನ್ನು ಬ್ರಿಟಿಶರೂ ಆಕ್ರಮಿಸಿ, ಅರಸ ರೇಜಾ ಶಾ ನನ್ನು ಕಿತ್ತುಹಾಕಿ ಅವನ ಮಗನನ್ನು ಪಟ್ಟಕ್ಕೇರಿಸಿದರು.

ಇದೇನೋ ತಾತ್ಕಾಲಿಕ ಗಂಡಾಂತರಕ್ಕೆ ಮದ್ದಾಯಿತು. ಆದರೆ ಬ್ರಿಟಿಶರ ಪಾಲಿಗೆ ಅದು ಜಡ್ಡಿಗಿಂತಲೂ ಭಯಂಕರವಾದ ಮದ್ದಾಯಿತೆಂದು ಹೇಳಬೇಕು. ೨೫ ವರ್ಷ ಬಾಹ್ಯ ಜಗತ್ತಿನಿಂದ ಸಂಪರ್ಕ ಕಡಿದುಕೊಂಡು ಏಕಾಂತದಲ್ಲಿ ಬಾಳಿದ ರಶಿಯಾದಲ್ಲಿ ಝಾರಕಾಲೀನ ರಶಿಯನ್ ರಾಜಕಾರಣಿಗಳ ಆಶೆ ಆಕಾಂಕ್ಷೆಗಳು ಮರುಕಳಿಸಿದವು ತಮ್ಮ ಬೆಳೆಯುತ್ತಿರುವ ಯುದ್ಧ ಮತ್ತು ಔದ್ಯೋಗಿಕ ಅವಶ್ಯಕತೆಗಳಿಗೆ ಅವರಿಗೆ ಎಣ್ಣೆ ಬೇಕಾಗಿತ್ತು. ಅವರು ಅದಕ್ಕಾಗಿ ಚೆನ್ನಾಗಿ ಮುಂದಾಲೋಚಿಸಿ ಯೋಜನೆಗಳನ್ನು ಸಿದ್ಧಗೊಳಿಸಿದರು. ೨೦೦೦ ಶ್ರೀಮಂತ ಕುಲಗಳ ಹಿತಸಂಬಂಧ ಹೊರತು ಬೇರೆ ರಾಜಕಾರಣವೇ ಇದ್ದಿಲ್ಲದ ಇರಾಣದಲ್ಲಿ ಅವರು ಮೊದಲನೆ ಬಾರಿ ಕೂಲಿಕಾರ ಪಕ್ಷ (ತುದೇ) ದ ಸ್ಥಾಪನೆಗೆ ಬೆಂಬಲ, ಹಣ, ತರಬೇತಿ ಕೊಟ್ಟರು. ಅದು ಚನ್ನಾಗಿ ಕೆಲಸವನ್ನೂ ಮಾಡಿತು. ಅದರಲ್ಲಿದ್ದವರು ಹೆಚ್ಚಾಗಿ ಶ್ರೀಮಂತರೇ ಇದ್ದರೂ ಬ್ರಿಟಿಶರನ್ನೂ ಇರಾಣಿ ಜಮೀನ್ದಾರರನ್ನೂ ನಡುಗಿಸಲು ಅದೇ ಸಾಕಾಯಿತು. ಅದು ೧೯೪೪ರ ಜೂನ್‌ನ ಸುಮಾರಿಗೆ ಮಜ್ಲಿಸದಲ್ಲಿ ತನ್ನ ಪ್ರಭಾವವನ್ನು ಬೀರುವಷ್ಟು ಸಾಮರ್ಥ್ಯ ಗಳಿಸಿತು. ರಶಿಯನ್ ಕಮ್ಯುನಿಸ್ಟರ ಸಾಮಾನ್ಯ ಪದ್ಧತಿಯಂತೆ ಜನಸಾಮಾನ್ಯರ ಹೆಸರು ಹಿಡಿದು ಕೂಗಹತ್ತಿದ ಈ ಪಕ್ಷದ ಪ್ರಭಾವಕ್ಕೆ ಬ್ರಿಟಿಶರೂ ಸರಕಾರವೂ ಹೆದರುವಂತಾಯಿತು.

## ಅಝುರಬೈಜಾನದಲ್ಲಿ

ಇದೇ ಕಾಲದಲ್ಲಿ ಮಧ್ಯಪೂರ್ವದ ಎಲ್ಲ ದೇಶಗಳಲ್ಲಿದ್ದಂತೆ ಇರಾಣದಲ್ಲಿಯೂ ಇರುವ ಅಲ್ಪಸಂಖ್ಯಾಕರ ಅಸ್ತಿತ್ವದ ಪ್ರಯೋಜನವನ್ನು ಸ್ಟಾಲಿನ್ನರು ಪಡೆದರು. ಉತ್ತರ ಇರಾಣದ ಅತ್ಯಂತ ಫಲವತ್ತಾದ ರಶಿಯನ್ ಆಕ್ರಮಿತ ಪ್ರದೇಶದಲ್ಲಿದ್ದ ಅಝುರಬೈಜಾನದ ಜನರು (ಜನಸಂಖ್ಯೆ ಸುಮಾರು ೨೦ ಲಕ್ಷ) ಇರಾಣದ ಅಲ್ಪಸಂಖ್ಯಾಕರು. ಗಡಿಯ ಆಚೆಗೆ ಸೋವಿಯಟ್ ಅಝುರಬೈಜಾನದ ಜನರೊಡನೆ ಜನಾಂಗಿಕ, ಭಾಷಾ, ಸ್ವಭಾವ ಬಂಧುತ್ವವುಳ್ಳ ಈ ಪ್ರಾಂತದ ಸಾಮಾನ್ಯ ಜನರೊಡನೆ ರಶಿಯನ್ನರು ಕಲೆತುಬೆರೆತು ಅವರಲ್ಲಿ ರಾಷ್ಟ್ರೀಯತೆಯನ್ನು ಜಾಗ್ರತ ಗೊಳಿಸಿದರು ಗಡಿಯ ಆಚೆಗಿರುವ ಸೋವಿಯಟ್ ಅಝುರಬೈಜಾನದಿಂದ ಸುಶಿಕ್ಷಿತ, ರಾಜಕಾರಣಜ್ಞ ಅಝುರಬೈಜಾನರು ಬಂದು ಅವರದೇ ಭಾಷೆಯಲ್ಲಿ ಮಾಡಿದ ಪ್ರಚಾರ ಪರಿಣಾಮಕಾರಿಯಾಗದೇ ಇಲ್ಲ. ಬೇಗನೆ ಇರಾಣಿ ಅಝುರ ಬೈಜಾನರು ಸ್ವಾಯತ್ತತೆಯನ್ನು ಬೇಡಿ ಚಳವಳಿ ಹೂಡಿದರು. ಅಝುರಬೈಜಾನದ ಸಮೃದ್ಧ ಭೂಮಿಯಲ್ಲಿ ದೊಡ್ಡ ದೊಡ್ಡ ಜಮೀನ್ದಾರಿಗಳ ಒಡೆಯರಾಗಿರುವ ಇರಾಣಿ ಮಜ್ಲಿಸದ ರಾಜಕಾರಣಿಗಳ ಮೇಲೆ ಈ ವರ್ಗ ಸಾಮಾನ್ಯ ನಾಗರಿಕ ಹಕ್ಕುಗಳಿಂದ ಕೂಡ ವಂಚಿತರಾಗಿದ್ದ ಅಜರಬೈಜಾನರಲ್ಲಿ ಎದ್ದ ಈ ಹೊಸ ಜಾಗ್ರತಿ ಮತ್ತೊಂದು ವಜ್ರಾಘಾತವನ್ನು ಕೂಡಿಸಿತು.

ದಕ್ಷಿಣದ ಎಣ್ಣೆ ಗಣಿಗಳನ್ನೂ ಪರ್ಶಿಯನ್ ಕೊಲ್ಲಿಯ ಬಂದರಗಳನ್ನೂ ನಿರ್ಭಯವಾಗಿ ಉಪಭೋಗಿಸುತ್ತ ಬಂದಿದ್ದ ಬ್ರಿಟಿಶರಿಗೆ ಇದರಿಂದ ಗಾಬರಿಯಾಯಿತು. ಇದಕ್ಕಾಗಿ ಇರಾಣದಲ್ಲಿ ತಮ್ಮ ಸ್ಥಿತಿಯನ್ನು ಬಲಪಡಿಸಿಕೊಳ್ಳಲು ಅವರು ಇರಾಣಿ ಎಣ್ಣೆಯ ಶೋಷಣೆಯಲ್ಲಿ ಪಾಲುಗಾರರಾಗಲು ಅಮೇರಿಕನ್ನರನ್ನು ಕೇಳಿಕೊಂಡರು. ರಶಿಯನ್ ಪ್ರಭಾವಕ್ಕೆ ಬೆದರಿದ್ದ ಮಜ್ಲಿಸ್ ಪ್ರಮುಖರು ಅಮೇರಿಕೆಗೂ ಎಣ್ಣೆ ಸವಲತ್ತು ಕೊಟ್ಟು ಬ್ರಿಟಿಶರ ಕೈ ಬಲಗೊಳಿಸಲು ಸಿದ್ಧರಾಗಿದ್ದರು. ಆದರೆ ಇದೇ ಸಮಯಕ್ಕೆ ಇರಾಣದಲ್ಲಿ ರಶಿಯನ್ನರೂ ಎಣ್ಣೆ ಸವಲತ್ತುಗಳಿಗಾಗಿ ಅರ್ಜಿ ಹಾಕಿದ್ದರು. ಆಗ ಸರಕಾರ ಪೇಚಿನಲ್ಲಿ ಬಿತ್ತು. ರಶಿಯನ್ನರಿಗೆ ಸವಲತ್ತು ಕೊಡಲು ಅವಕ್ಕೆ ಮನಸ್ಸಿದ್ದಿಲ್ಲ. ಈ ಇಕ್ಕಟ್ಟಿನಿಂದ ಪಾರಾಗಲು ಮಜ್ಲಿಸ್ಸು, ವಿದೇಶಿ ಸೈನ್ಯಗಳು ಇರಾಣದಲ್ಲಿರುವ ವರೆಗೆ ಯಾರಿಗೂ ಹೊಸ ಸವಲತ್ತು ಕೊಡುವದಿಲ್ಲೆಂದು ನಿರ್ಣಯ ಮಾಡಿತು. ಅಮೇರಿಕನ್ನರಿಗೂ ರಶಿಯನ್ನರಿಗೂ ಅದು ದೊರೆಯಲಿಲ್ಲ.

ಹೀಗೆ ಎಣ್ಣೆ ಸವಲತ್ತು ಪಡೆಯುವ ರಶಿಯನ್ ಕೂಟ ಮೊದಲನೆ ಬಾರಿ ಸೋತು ಹೋಯಿತು. ತುದೇ ಪಕ್ಷದವರು ರಶಿಯನ್ನರನ್ನು ಯಾವಾಗಲೂ ಬೆಂಬಲಿಸುತ್ತ ಹೋಗುತ್ತಿದ್ದರಿಂದ ಅದು ಇರಾಣಿಗಳ ಶಂಕೆಗೂ ಪಾತ್ರವಾಗಿ ನಿರೀಕ್ಷಿಸಿದಷ್ಟು ಜನಾನುರಾಗಕ್ಕೆ ಪಾತ್ರವಾಗಲಿಲ್ಲ. ಹೀಗೆ ತಾತ್ಕಾಲಿಕ ಸೋಲಿನಿಂದ ಬೆದರದೆ ರಶಿಯನ್ನರು ಅಝುರಬೈಜಾನ ಚಳವಳಿಯನ್ನು ಭರದಿಂದ ಸಾಗಿಸಿದರು. ರಶಿಯನ್ ಆಕ್ರಮಿತ ಪ್ರದೇಶದಲ್ಲಿ ಅವರ ಸಹಾನುಭೂತಿಯಿಂದ ಸಾಗಿದ್ದ ಈ ಚಳವಳಿಯನ್ನು ಮುರಿಯಲು ಕೇಂದ್ರ ಸರಕಾರ ಮಾಡತಕ್ಕದ್ದೇನೂ ಇದ್ದಿದ್ದಿಲ್ಲ ಅಝುರಬೈಜಾನ ದಂಗೆಯೆದ್ದು ಸ್ವಾಯತ್ತ ಸರಕಾರವೊಂದನ್ನು ಸ್ಥಾಪಿಸಿಕೊಂಡ ಸುದ್ದಿ ಈಚಿಗಿನ ಇತಿಹಾಸವಾಗಿದೆ. ಈ ಘಟನೆಯ ನಂತರ ಇರಾಣಿ ಸರಕಾರದ ರಶಿಯನ್ ವಿರೋಧಿ ಮಂತ್ರಿಗಳೂ ಅಧಿಕಾರಿಗಳೂ ಒಬ್ಬೊಬ್ಬರಾಗಿ ಕಿತ್ತುಹಾಕಲ್ಪಟ್ಟು ಈ ಪ್ರಶ್ನೆಯನ್ನು ಕೊನೆಗೆ ಯುಕ್ತರಾಷ್ಟ್ರಗಳ ಮುಂದೆ ತರಲು ಧೈರ್ಯ ಮಾಡಿದ ೭೫ ವರ್ಷದ ಮುಖ್ಯ ಮಂತ್ರಿ ಹಕೀಮಿಯು ರಾಜೀನಾಮೆ ಕೊಟ್ಟ ಪ್ರಸಂಗ ರಶಿಯನ್ ಒತ್ತಾಯದ ಪ್ರಾಬಲ್ಯವನ್ನು ಸೂಚಿಸುತ್ತದೆ. ಇದಕ್ಕೆ ಕಾರಣ ಬೇರೇನೂ ಇಲ್ಲ. ಮಜ್ಲಿಸ ಜಮೀನ್ದಾರರು ರಶಿಯನ್ನರನ್ನು ತಡೆಯುವಲ್ಲಿ ಆಂಗ್ಲೋ-ಅಮೇರಿಕನ್ನರ ಸಾಮರ್ಥ್ಯವನ್ನು ನಂಬುವದಿಲ್ಲ. ಆದುದರಿಂದ ಉತ್ತರದ ತಮ್ಮ ಸಂಪತ್ತನ್ನು ಪೂರ್ಣ ಕಳೆದುಕೊಳ್ಳುವ ಬದಲು ರಶಿಯನ್ ಪ್ರಭಾವಕ್ಕೆ ತಲೆವಾಗುವದೆ ಹಿತವೆಂದು ಅವರು ಭಾವಿಸಿದ್ದಾರೆ. ರಶಿಯನ್ನರಿಗೆ ಪ್ರಿಯನಾದ ಹೊಸ ಮುಖ್ಯ ಮಂತ್ರಿ ಸುಲ್ತಾನೆ ಅಝುರಬೈಜಾನದಲ್ಲಿ ದೊಡ್ಡ ಆಸ್ತಿವಂತನೆಂದು ಹೇಳಿದರೆ ಅವರು ಯಾವ ಹಾದಿ ಹಿಡಿದಿದ್ದಾರೆಂದು ತಿಳಿಯುವದು.

## ಬ್ರಿಟಿಶ ದೌರ್ಬಲ್ಯ

ಹೀಗೆ ಪರ್ಶಿಯನ್ ಕೊಲ್ಲಿಯ ಕಡೆಗೆ ಮುನ್ನಡೆ, ಎಣ್ಣೆ ಸವಲತ್ತು ಪಡೆಯುವ ಪ್ರಯತ್ನಗಳಲ್ಲಿ ರಶಿಯನ್ನರು ಮಧ್ಯಪೂರ್ವದ ಸಾಮಾಜಿಕ ಮತ್ತು ಅಲ್ಪ ಸಂಖ್ಯಾಕ ಸಮಸ್ಯೆಗಳನ್ನು ಬಳಸಿಕೊಳ್ಳುತ್ತಿದ್ದಾರೆ ಅವರು ಇದರಲ್ಲಿ ಸಮಾಜದ ಪ್ರಗತಿಶೀಲ ಸತ್ವಗಳನ್ನು ಎತ್ತಿ ಹಿಡಿಯುತ್ತಿದ್ದಾರೆ. ಬ್ರಿಟಿಶರು ಪ್ರತಿಗಾಮಿ ಶಕ್ತಿಗಳಿಗೆ ಕೊಡುತ್ತ ಬಂದಿದ್ದ ಬೆಂಬಲ, ವಾಗ್ದಾನಗಳನ್ನು ಅನುಲಕ್ಷಿಸಿದರೆ ಅದರಿಂದ ಅವರು ಬಿಡಿಸಿಕೊಂಡವಿನಾ ಜನಸಾಮಾನ್ಯರಲ್ಲಿ ಅವರ ಪ್ರತಿಷ್ಠೆ ಇನ್ನಷ್ಟು ಇಳಿಯುವದರಲ್ಲಿ ಸಂಶಯವಿಲ್ಲ. ಕೂಲಿಕಾರ ಸರಕಾರವಿದ್ದರೂ ಸಾಯಭಾರ ಕ್ರಿಯೆಯೆಲ್ಲ ಬ್ರಿಟಿಶ ಕಾನ್ಸರ್ವೇಟಿವರ ಕೈಯಲ್ಲಿರುವದರಿಂದಲೂ ಬೆವಿನರು ಹಳೆಯ ಸರಕಾರದ ವಿದೇಶ ಧೋರಣೆಗೇ ಬದ್ಧರಾಗಿರುವದರಿಂದಲೂ ಬ್ರಿಟಿಶ ಧೋರಣೆ ಪ್ರಗತಿಶೀಲವಾಗುವದು ಸಾಧ್ಯವಿಲ್ಲ.

ರಶಿಯನ್ನರು ಕೇಳು ಜರಿದಿರುವರು ಇರಾಣದಲ್ಲಿ ಮಾತ್ರವಲ್ಲ ಬ್ರಿಟಿಶರ ಕೈಗೊಂಬೆಯಾದ ಇರಾಕ ದಲ್ಲಿನ ೬೦೦,೦೦೦ ಕುರ್ದ ಜನರಲ್ಲಿ ಈಗಾಗಲೆ ಗಡಿಯಾಚೆಗೆ ಇರಾಣದಲ್ಲಿರುವ ೬೦೦,೦೦೦ ಜನಾಂಗ ಬಂಧುಗಳೊಡನೆ ಸೇರುವ ಬಯಕೆಯನ್ನು ಜಾಗ್ರತಗೊಳಿಸಲಾಗಿದೆ. ತುರ್ಕಿ, ಸಿರಿಯಾ ಲೆಬನಾನಗಳಲ್ಲಿನ ಅರ್ಮೇನಿಯನ್ ಅಲ್ಪಸಂಖ್ಯಾಕರು ಸೋವಿಯಟ್ ಆರ್ಮೇನಿಯನ್ ಪ್ರಜಾರಾಜ್ಯದಲ್ಲಿ ಒಂದಾಗಲು ಹವಣಿಸುವದೂ ಸ್ವಾಭಾವಿಕವಾಗಿದೆ. ಬೀರುಟ (ಲೆಬನಾನ್) ದಮಸ್ಕಸ್ (ಸೀರಿಯಾ)ಗಳಲ್ಲಿ ಪ್ರಬಲ ಸೋವಿಯಟ್ ಪ್ರಚಾರ ಕಚೇರಿಗಳು ತೆರೆಯಲ್ಪಟ್ಟಿವೆ. ರಶಿಯಾದ ಪೆಟ್ರಿಯಾರ್ಕ (ಕ್ರಿಶ್ಚಿಯನ್ ಜಗದ್ಗುರು) ಈ ಭಾಗಗಳಲ್ಲಿ ಈಚಿಗೆ ಸಂಚಾರ ಮಾಡಿದ್ದಾನೆ. ಇರಾಕದ ಕುರ್ದ ಜನರ ದಂಗೆಯನ್ನು ಸದ್ಯಕ್ಕೆ ಇರಾಕಿ ಸರಕಾರ ಲಂಚಕೊಟ್ಟು ಮುರಿಬಡಿದಿದ್ದರೂ ಅದು ಅಲ್ಲಿಗೇ ತಣ್ಣಗಾಗುವಂತೆ ಕಾಣಿಸುವದಿಲ್ಲ. ಸೋವಿಯಟ್ಟರು ಧರ್ಮದ್ವೇಷ ಧೋರಣೆಯನ್ನು ಬದಿಗೊತ್ತಿ ಕಮಾಲ ಪಾಶಾನು ೨೫ ವರ್ಷಗಳ ಹಿಂದೆ ಕಿತ್ತುಹಾಕಿದ ಖಿಲಾಫತ್ ಸಂಸ್ಥೆಯನ್ನು ಸೋವಿಯಟ್ ಮುಸ್ಲಿಂ ಪ್ರದೇಶಗಳಲ್ಲಿ ಪುನರುಜ್ಜೀವಿಸಿ ಒಬ್ಬ ಖಲೀಫನನ್ನು ನೇಮಿಸಲಿದ್ದಾರೆಂದು ಈಚಿಗೆ ವರದಿಯಾಗಿದೆ. ಧರ್ಮಪ್ರೇಮಿಗಳಾದ ಮುಸ್ಲಿಂ ಜನರನ್ನು ತಮ್ಮ ಕಡೆ ಸೆಳೆಸಿಕೊಳ್ಳಲು ಅವರು ಪ್ರಯತ್ನಿಸುತಿರುವದರ ದ್ಯೋತಕವಿದು. ೩ ಕೋಟಿ ಮುಸಿಮರನ್ನೊಳಗೊಂಡ, ಮತ್ತು ಅವರನ್ನು ಅಜ್ಞಾನಾಂಧಕಾರದಿಂದ ಹೊರಗೆಳೆದು ತಂದ ಯಶಸ್ಸುಳ್ಳ ರಶಿಯನ್ನರ ಪ್ರಯತ್ನಕ್ಕೆ ಮುಸ್ಲಿಮರು ತೀರ ಕಿವುಡರಾಗುವರೆನ್ನುವಂತಿಲ್ಲ ಸೀರಿಯಾ, ಲೆಬನಾನ, ಪಾಲಿಸ್ತಾನಗಳ ಅರಬರಿಗೆ ಯುಕ್ತರಾಷ್ಟ್ರ ಸಂಘದಲ್ಲಿ ಬ್ರಿಟಿಶರ ವಿರುದ್ಧ ಬೆಂಬಲ ಕೊಡುವ ಮೂಲಕ ಅಲ್ಲಿಯೂ ಅವರು ಜನಪ್ರಿಯತೆ ಗಳಿಸತೊಡಗಿದ್ದಾರೆ.

ಮಧ್ಯಪೂರ್ವದಲ್ಲಿ ಸ್ವಯಂಪ್ರೇರಿತವಲ್ಲದಿದ್ದರೂ ಪರಿಸ್ಥಿತಿಯ ಪ್ರಭಾವದಿಂದ ಒಂದು ದೊಡ್ಡ ಸಮುದ್ರಮಂಥನ ಪ್ರಾರಂಭವಾಗಿದೆ. ಈ ಮಂಥನದಲ್ಲಿ ಹೊರಡುವ ಅಮೃತವನ್ನು ಅಲ್ಲಿಯ ಜನರೇ ಪಡೆಯುವರೋ ವಿದೇಶೀಯರ ಪಾಲಿಗೆ ಹೋಗಗೊಡುವರೋ ನೋಡತಕ್ಕದ್ದಿದೆ. ಆದರೆ ಅದರಲ್ಲಿ ಹುಟ್ಟಿದ ವಿಷವನ್ನು ಮಾತ್ರ ಬ್ರಿಟಿಶರು ನುಂಗಬೇಕಾಗುವದೆಂದು ಹೇಳಲಡ್ಡಿಯಿಲ್ಲ.

# ವಾರದ ಭವಿಷ್ಯ

ಜ್ಯೋತಿಷಿ:-ಕೃಷ್ಣಶಾಸ್ತ್ರಿ ಭಿಡೆ, ಭವಿಷ್ಯಕಥನ ಕಾರ್ಯಾಲಯ, ಖಡೇಬಜಾರ ಬೆಳಗಾವಿ

## ತಾರೀಖು ೪ ಮಾರ್ಚದಿಂದ ೧೦ ರ ವರೆಗೆ

### ಮೇಷ

ಎಲ್ಲರ ಪ್ರಕೃತಿ ನೆಟ್ಟಗೆ. ಪ್ರಾಪಂಚಿಕ ಸುಖ ಉತ್ತಮ ಸ್ತ್ರೀ ಸಂತತಿ ಮತ್ತು ಆಶ್ರಿತರು ಒಮ್ಮನಸ್ಸಿನಿಂದಿರುವರು. ಕುಟುಂಬದ ಉತ್ಕರ್ಷ ಪ್ರಸಂಗ ನಿಶ್ಚಿತವಾಗಿ ಘಟಿಸುವದು ಇಷ್ಟ ಜನರ ಸಹವಾಸದಿಂದ ಮನಸ್ಸಿಗೆ ಆನಂದವಾಗುತ್ತದೆ. ಆದರೆ ಅವರ ಪರಿವಾರದಲ್ಲಿ ಒಬ್ಬನಿಗೆ ಶಾರೀರಿಕ ಕ್ಲೇಶ ಅಥವಾ ಮನೋಭಂಗದ ಪ್ರಸಂಗ ಒದಗುವದು ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮ. ಮಿತ್ರಸುಖ ನೆಟ್ಟಗೆ. ವಾದ ಅಥವಾ ಸ್ಪರ್ಧೆಯಲ್ಲಿ ಇಬ್ಬರಿಗೂ ಸಮಾನತೆ ಉಳಿಯುವದು. ಪತ್ರವ್ಯವಹಾರಕ್ಕಿಂತ ಭೆಟ್ಟಿ, ಪ್ರವಾಸ ಮತ್ತು ಭೆಟ್ಟಿ ನೆಟ್ಟಗೆ. ಅಶ್ವಿನಿ ಕಡೆಯ ೩ ಚರಣ ಮತ್ತು ಭರಣಿ ೧ ನೇ ಚರಣಕ್ಕೆ ಹೆಚ್ಚು ನೆಟ್ಟಗೆ. ತಾ. ೪, ೭, ೮, ಮತ್ತು ೯ ನೆಟ್ಟಗೆ.

### ವೃಷಭ

ಪ್ರಕೃತಿ ಉತ್ತಮ. ಆದರೆ ಅಪ್ರಮಾಣದಿಂದ ಪ್ರಾಪಂಚಿಕ ಸುಖ ಹೆಚ್ಚು ಶಿಗಲಾರದು. ಪ್ರತ್ಯೇಕ ಕೆಲಸದಲ್ಲಿಯೂ ತ್ರಾಸದಿಂದ, ಕಷ್ಟದಿಂದ ಯಶ ಶಿಗುವದು. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಉತ್ತಮ. ಆದರೆ ಆ ಪ್ರಮಾಣದಿಂದ ಲಾಭ ಬಹಳ ಕಡಿಮೆ. ವೃತ್ತು ಪ್ರತಿಯೊಂದು ಬಾಬಿನಲ್ಲಿಯೂ ಒಂದಕ್ಕೆ ಎರಡರಷ್ಟು ಖರ್ಚು ಮಾಡದೆ ಯಶ ಶಿಗದು. ಸ್ನೇಹದಲ್ಲಿಯೂ ಒಳ್ಳೆ ವಿರೋಧ ವಾದ ಅಥವಾ ಸ್ಪರ್ಧೆಯಲ್ಲಿ ಶತ್ರುವಿನದೇ ಮೇಲುಗೈ. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ನೆಟ್ಟಗೆ. ರೋಹಿಣಿಯ ಕಡೆಯ ೩ ಚರಣ ಮತ್ತು ಮೃಗಶಿರಾ ೧ ನೇ ಚರಣಕ್ಕೆ ಹೆಚ್ಚು ತ್ರಾಸ. ತಾ. ೪, ೫, ೬ ಮತ್ತು ೧೦ ನೆಟ್ಟಗೆ.

### ಮಿಥುನ

ಪ್ರಕೃತಿ ಉತ್ತಮ. ಸ್ತ್ರೀ ಮತ್ತು ಸಂತತಿ ಸುಖ ನೆಟ್ಟಗೆ ಆದರೆ ಇತರ ಬಾಬಿನಲ್ಲಿ ಪ್ರಾಪಂಚಿಕ ಅಡಚಣಿಗಳು ಬಹಳ. ಉದ್ಯೋಗದಲ್ಲಿ ಪ್ರಗತಿ, ಪ್ರತಿಷ್ಠೆ ಮತ್ತು ಲಾಭ ನೆಟ್ಟಗೆ. ಆದರೆ ಒಂದೇ ಕೆಲಸದಲ್ಲಿ ಹೆಚ್ಚು ತ್ರಾಸ ಮತ್ತು ಖರ್ಚು ಮಾಡುವ ಪ್ರಸಂಗ. ವಾದದಲ್ಲಿ ಉತ್ತಮ ಯಶಸ್ಸು, ಮಿತ್ರ ಸುಖ ನೆಟ್ಟಗೆ. ದೈವೀಕೃಪೆಯಿಂದ ಆಗುವ ಘಟನೆಗಳ ಯೋಗ. ಪ್ರವಾಸ ಮುಂತಾದ ಕೆಲಸಗಳು ಹಿತಕರ. ಆರಿದ್ರಾ ಕಡೆಯ ೩ ಮತ್ತು ಪುನರ್ವಸು ೧ ನೇ ಚರಣಕ್ಕೆ ಹೆಚ್ಚು ನೆಟ್ಟಗೆ. ತಾ. ೫, ೬, ೭ ಮತ್ತು ೮ ನೆಟ್ಟಗೆ.

### ಕರ್ಕ

ಸ್ವಂತದ ಪ್ರಕೃತಿಗೆ ಕಮ್ಮಿ ಸುಖ. ಮತ್ತು ಹೆಂಡತಿಗೆ ಅಜಾರಿ ಭಯ. ಆದರೆ ಇತರ ಪ್ರಾಪಂಚಿಕ ಸುಖ ಮಧ್ಯಮ. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ಉತ್ತಮ. ಆದರೆ ಪತ್ತು ಮತ್ತು ಪ್ರತಿಷ್ಠೆಗೆ ತ್ರಾಸಕರ. ಕೈಯಲ್ಲಿ ಸರಕಾರೀ ಅಧಿಕಾರವುಳ್ಳವರಿಗೆ ಹೆಚ್ಚು ಭಯ. ಧನಿಕರಿಂದ ಒತ್ತಾಯ. ಭೆಟ್ಟಿಯಕಿಂತ್ರ ಪ್ರವಾಸ ಪತ್ರವ್ಯವಹಾರ ನೆಟ್ಟಗೆ ವಾದ ಮತ್ತು ಸ್ಪರ್ಧೆಯಲ್ಲಿ ಶತ್ರುವಿನ ದುಪ್ಪಟ್ಟು ಹಾನಿ. ಪುಷ್ಯ ಕೊನೆಯ ೩ ಮತ್ತು ಆಶ್ಲೇಷಾ ೧ ನೇ ಚರಣಕ್ಕೆ ತ್ರಾಸ ಕಡಿಮೆ. ತಾ. ೭, ೮, ೯ ನೆಟ್ಟಗೆ.

### ಸಿಂಹ

ಪ್ರಕೃತಿ ಮತ್ತು ಸ್ತ್ರೀ ಸುಖ ನೆಟ್ಟಗೆ. ಮಕ್ಕಳ ಉನ್ನತಿ ಆದರೆ ಅವರ ವರ್ತನ ಮನಸ್ಸಿಗೆ ಬಾರದು. ಇತರ ಬಾಬಿನಲ್ಲಿ ಪ್ರಾಪಂಚಿಕ ಸುಖ ನೆಟ್ಟಗೆ ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಹೆಚ್ಚಿ ಲಾಭ ಹೆಚ್ಚಿಗೆ ದೊರೆತು, ಅಮೂಲ್ಯ ವಸ್ತುಗಳ ಅಥವಾ ಬಂಗಾರದ-ಸ್ವಲ್ಪಾದರೂ-ಸಂಗ್ರಹವಾಗುವ ಯೋಗ. ಮಿತ್ರರಿಂದ ಕೊಂಕುಮಾತು. ಧರ್ಮ ವಿಷಯಕ್ಕೆ ಅನಾದರ ಧೋರಣೆ. ವಾದದಲ್ಲಿ ಇಲ್ಲವೆ ಸ್ಪರ್ಧೆಯಲ್ಲಿ ಜಯ ಅಥವಾ ಸನ್ಮಾನ್ಯ ಒಪ್ಪಂದ. ಪ್ರವಾಸಾದಿ ಕೆಲಸಗಳು ಬಹಳ ಹಿತಕರ. ಮಘಾ ಕೊನೆಯ ೩ ಚರಣ ಮತ್ತು ಪೂರ್ವಾದ ೧ ನೇ ಚರಣಕ್ಕೆ ತ್ರಾಸ ಕಡಿಮೆ. ತಾ. ೭, ೮, ೯ ನೆಟ್ಟಗೆ.

### ಕನ್ಯಾ

ನಿಮ್ಮದು ಮತ್ತು ಹೆಂಡತಿಯದು ಪ್ರಕೃತಿ ನೆಟ್ಟಗೆ. ಆದರೆ ಮನೆತನದ ಒಂದು ಪ್ರಶ್ನೆಯ ನಿಮಿತ್ತ ನಿಮ್ಮ ನಿಮ್ಮಲ್ಲಿ ಮತಭೇದವಾಗಿ ಮನಸ್ತಾಪದ ಸಂಭವ. ಉದ್ಯೋಗದಲ್ಲಿ ಪ್ರಗತಿ, ಪ್ರತಿಷ್ಠೆಗಳು ಉತ್ತಮವಿದ್ದರೂ ಲಾಭ ಅತಿ ಕಡಿಮೆ. ಮಾಡಿದ್ದೆಲ್ಲ ಮೈಮೇಲೆ ಬರುವ ಭೀತಿ! ವಾದ ಸ್ಪರ್ಧೆಗಳಲ್ಲಿ ಸಮಾನ ಸ್ಥಿತಿ. ಮಿತ್ರರಿಂದ ಮನನೋಯಿಸುವ ಕೃತಿಗಳ ಸಂಭವ. ಪ್ರವಾಸ ತ್ರಾಸಕಾರಕ. ಆದರೆ ಭೆಟ್ಟಿ ಪತ್ರವ್ಯವಹಾರ ನೆಟ್ಟಗೆ. ಹಸ್ತಾದ ಕೊನೆಯ ೩ ಮತ್ತು ಚಿತ್ರಾ ೧ ನೇ ಚರಣಕ್ಕೆ ತ್ರಾಸ ಕಡಿಮೆ. ತಾ. ೫, ೬, ೯ ಮತ್ತು ೧೦ ನೆಟ್ಟಗೆ.

### ತುಲಾ

ಪ್ರಕೃತಿ ಉತ್ತಮ. ಸ್ತ್ರೀ ಸುಖ ನೆಟ್ಟಗೆ. ಇತರ ವಿಷಯದಲ್ಲಿ ಪ್ರಾಪಂಚಿಕ ಸುಖ ಸಾಧಾರಣ. ಜನರಿಂದ ತಿಳಿಯದೆ ನಗಿಸಿಕೊಳ್ಳುವ ಕಾರ್ಯ. ನಿಮ್ಮಿಂದ ಆಗುವ ಸಂಭವ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಕಡಿಮೆ. ಲಾಭ ಹೆಚ್ಚು ಸ್ಪರ್ಧೆಯಲ್ಲಿ ಉತ್ತಮ ಯಶ ಸಿಕ್ಕರೂ ಶತ್ರುವಿನ ಬಲ ಕಾಯಂ ಉಳಿಯುವದು. ಪ್ರವಾಸ, ಪತ್ರವ್ಯವಹಾರಕ್ಕಿಂತ ಭೆಟ್ಟಿ ನೆಟ್ಟಗೆ. ಸ್ವಾತಿ ಕಡೆಯ ೩ ಮತ್ತು ವಿಶಾಖಾದ ೧ ನೇ ಚರಣಕ್ಕೆ ತ್ರಾಸ ಕಡಿಮೆ. ತಾ. ೪, ೭, ೮ ನೆಟ್ಟಗೆ.

### ವೃಶ್ಚಿಕ

ಪ್ರಕೃತಿ ಸಾಧಾರಣ, ಸ್ತ್ರೀ ಸುಖ ನೆಟ್ಟಗೆ. ಆದರೆ ಇತರ ಬಾಬಿನಲ್ಲಿ ಪ್ರಾಪಂಚಿಕ ತ್ರಾಸ ಹೆಚ್ಚು. ಉದ್ಯೋಗದಲ್ಲಿ ಪ್ರಗತಿ ಕಡಿಮೆ. ಪ್ರತಿಷ್ಠೆ ಮತ್ತು ಲಾಭ ಹೆಚ್ಚಿಗೆ. ಒಳ್ಳೆ ಕೆಲಸದಲ್ಲಿ ಖರ್ಚು ಹೆಚ್ಚು. ಇದ್ದೂರಲ್ಲಿ ಗೌರವ ಹೆಚ್ಚುವ ಯೋಗ ವಾದ ಮತ್ತು ಸ್ಪರ್ಧೆಯಲ್ಲಿ ಉತ್ತಮ ಯಶಸ್ಸು. ಪ್ರವಾಸ ಮುಂತಾದ ಕೆಲಸಗಳು ಸುಖಕರ. ಅನುರಾಧಾ ಕಡೆಯ ೩ ಮತ್ತು ಜೇಷ್ಠಾ ೧ ನೇ ಚರಣಕ್ಕೆ ತ್ರಾಸ ಕಡಿಮೆ. ತಾ. ೫, ೬, ೯ ಮತ್ತು ೧೦ ನೆಟ್ಟಗೆ.

### ಧನು

ಪ್ರಕೃತಿ ಉತ್ತಮ. ಆದರೆ ಹೆಂಡತಿಯೊಡನೆ ಮೇಲಿಂದ ಮೇಲೆ ಮತಭೇದವಾಗುವಿಕೆಯಿಂದ ಪ್ರಾಪಂಚಿಕ ಸುಖದಲ್ಲಿ ಬಹಳ ವಿರಸ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ. ಆದರೆ ಬಹಳ ಬಾಬುಗಳಲ್ಲಿ ಖರ್ಚಿನ ಯೋಗ. ವಾದ ಮತ್ತು ಸ್ಪರ್ಧೆಯಲ್ಲಿ ಅನುಕೂಲ. ಪ್ರವಾಸ ಮುಂತಾದ ಕೆಲಸ ಸುಖಕರ. ಮೂಲಾ ಕೊನೆಯ ೩ ಪೂರ್ವಾಷಾಢಾ ೧ ನೇ ಚರಣಕ್ಕೆ ತ್ರಾಸ ಕಮ್ಮಿ, ತಾ. ೪, ೭, ೮ ನೆಟ್ಟಗೆ.

### ಮಕರ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಸಾಧಾರಣ. ಆದರೆ ಸಂತತಿಗೆ ಪಳಿಗೆ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಹೆಚ್ಚಿದರೂ ಲಾಭ ಬಹಳ ಕಡಿಮೆ. ಮಿತ್ರರೊಡನೆ ಮತಭೇದ. ವಾದ ಮತ್ತು ಸ್ಪರ್ಧೆಯಲ್ಲಿ ಯಶ ಸಿಕ್ಕರೂ ಅದರ ಲಾಭ ದೊರಕುವದು ಕಠಿಣ. ಪ್ರವಾಸ ಮುಂತಾದ ಕೆಲಸಗಳು ಸಾಧಾರಣ ನೆಟ್ಟಗೆ. ಶ್ರವಣಾ ಕೊನೆಯ ೩ ಚರಣಕ್ಕೆ ತ್ರಾಸ ಹೆಚ್ಚು.

### ಕುಂಭ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಸಾಧಾರಣವಾದರೂ ಆಪ್ತ ಜನರ ಪೈಕಿ ತಮಗೆ ಬೇಕಾದವರೆ ಸಹವಾಸ ಘಟಿಸುವದು. ಉದ್ಯೋಗದಲ್ಲಿ ಪ್ರಗತಿ, ಪ್ರತಿಷ್ಠೆ ಮತ್ತು ಲಾಭವೂ ಹೆಚ್ಚು. ಮತ್ತು ಖರ್ಚು ಹೆಚ್ಚು. ವಾದ ಮತ್ತು ಸ್ಪರ್ಧೆಯಲ್ಲಿ ಯಶ ಉತ್ತಮ ಮಿತ್ರ ಸುಖ ನೆಟ್ಟಗೆ. ಪ್ರವಾಸ ಮುಂತಾದು ಹಿತಕರ. ಶತತಾರಕಾ ಕಡೆಯ ೩ ಮತ್ತು ಪೂರ್ವಾಭಾದ್ರಪದ ೧ ನೇ ಚರಣಕ್ಕೆ ತ್ರಾಸ ಕಡಿಮೆ. ತಾ. ೫, ೬, ೭ ೮ ನೆಟ್ಟಗೆ.

### ಮೀನ

ಪ್ರಕೃತಿ ಸಾಧಾರಣ. ಸ್ತ್ರೀ ಸುಖ ನೆಟ್ಟಗೆ. ಆದರೆ ಇತರ ಬಾಬಿನಲ್ಲಿ ಪ್ರಾಪಂಚಿಕ ತ್ರಾಸ ಬಹಳ. ಉದ್ಯೋಗದಲ್ಲಿ ಪ್ರತಿಷ್ಠೆಗಿಂತ ಪ್ರಗತಿ ಮತ್ತು ಲಾಭ ಹೆಚ್ಚು. ವಾದ ಮತ್ತು ಸ್ಪರ್ಧೆಗಳಲ್ಲಿ ಶತ್ರುವಿನದೇ ಹೆಚ್ಚು ಜೋರು. ಪ್ರವಾಸ ಮತ್ತು ಭೆಟ್ಟಿಯಕ್ಕಿಂತ ಪತ್ರವ್ಯವಹಾರ ನೆಟ್ಟಗೆ. ಉತ್ತರಾಭಾದ್ರಪದದ ಕೊನೆಯ ೩ ಮತ್ತು ರೇವತಿ ೧ ನೇ ಚರಣಕ್ಕೆ ತ್ರಾಸ ಕಡಿಮೆ. ತಾ. ೫, ೬, ೭ ಮತ್ತು ೮ ನೆಟ್ಟಗೆ,



ಈ ಪತ್ರಿಕೆಯು ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ ರಾಷ್ಟ್ರೀಯವಾಙ್ಮಯ ಪ್ರಕಾಶನ ಟ್ರಸ್ಟಿನ ಪರವಾಗಿ ಹ. ರಾ. ಮೋಹರೆಯವರಿಂದ ಮುದ್ರಿತವಾಗಿ ಪ್ರಕಟವಾಯಿತು.